Vol - 12 June 2013 Issue No. 06 ₹ 5.00/-





# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾಪತ್ರಿಕೆ

# Karnataka Scout & Guide

*News Magazine*

**ರಾಜ್ಯ ಸಂಸ್ಥೆಯ ಪ್ರಕಟಣೆಗಳ ಸಮಿತಿಯ ಅಧ್ಯಕ್ಷರಾದ ಶ್ರೀ ಗೊ.ರು.ಚನ್ನಬಸಪ್ಪ ಅವರು ರಾಷ್ಟ್ರೀಯ ಪುರಸ್ಕೃತರಾಗಿದ್ದಕ್ಕೆ ಹಾರ್ದಿಕ ಅಭಿನಂದನೆಗಳು**



ದಿನಾಂಕ:28.05.2013ರಂದು ರಾಷ್ಟ್ರಪತಿ ಭವನದಲ್ಲಿ ನಡೆದ ಸಮಾರಂಭದಲ್ಲಿ ಭಾರತದ ರಾಷ್ಟ್ರಪತಿ ಶ್ರೀ ಪ್ರಣಬ್ ಮುಖರ್ಜಿ ಅವರಿಂದ ಶ್ರೀ ಗೊ.ರು.ಚನ್ನಬಸಪ್ಪ ಅವರು ಕರ್ನಾಟಕ ಜಾನಪದ ಕ್ಷೇತ್ರಕ್ಕೆ ಸಲ್ಲಿಸಿದ ವಿಶೇಷ ಸೇವೆಗಾಗಿ ಕೇಂದ್ರ ಸಂಗೀತ ನಾಟಕ ಅಕಾಡಮಿಯ 2012ರ ಪ್ರಶಸ್ತಿಯನ್ನು ಸ್ವೀಕರಿಸಿದರು.







05 ಜೂನ್ 2013ರಂದು ಶಾಂತಿಗೃಹದಲ್ಲಿ ನಡೆದ "ವಿಶ್ವ ಪರಿಸರ ದಿನಾಚರಣೆ"ಯ ಉದ್ಘಾಟನಾ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಶ್ರೀಮತಿ ಬಿ. ಸುವರ್ಣಾದೇವಿ, ಜಂಟಿ ನಿರ್ದೇಶಕರು (ಶಾಲಾ ಶಿಕ್ಷಣ) ಸಾ.ಶಿ.ಇಲಾಖೆ ರವರು ಮಾತನಾಡುತ್ತಿರುವುದು. ಚಿತ್ರದಲ್ಲಿ ಶ್ರೀ ಹನುಮಂತಪ್ಪ, ಸಹಾಯಕ ಹಿರಿಯ ನಿರ್ದೇಶಕರು (ಯೋಜನೆ) ಸಾ.ಶಿ.ಇಲಾಖೆ, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರಾಜ್ಯ ಮುಖ್ಯ ಆಯುಕ್ತರು ಶ್ರೀ ಡಿ. ವೆಂಕಟೇಶ್ ರಾಜ್ಯ ಸಹಾಯಕ ಸ್ಕೌಟ್ಸ್ ಆಯುಕ್ತರು, ಶ್ರೀಮತಿ ಸುಮನ್‌ಲತಾ ಸಹಾಯಕ ನಿರ್ದೇಶಕರು, ದಕ್ಷಿಣ ವಲಯ ಭಾ.ಸ್ಕೌ. & ಗೈ., ಶ್ರೀ ಅನಲೇಂದ್ರಶರ್ಮ, ದಕ್ಷಿಣ ವಲಯ ಸಂಘಟನಾ ಆಯುಕ್ತರು ಶ್ರೀ ಎಂ.ಎ. ಖಾಲಿದ್, ರಾಜ್ಯ ಕಾರ್ಯದರ್ಶಿ ಹಾಗೂ ಇತರರನ್ನು ಕಾಣಬಹುದು. ನಂತರ ರಾಜ್ಯ ಮುಖ್ಯ ಆಯುಕ್ತರು ಹಸಿರು ಬಾವುಟ ತೋರಿಸುವುದರ ಮೂಲಕ ಪಥಚಲನವನ್ನು ಉದ್ಘಾಟಿಸಿದರು.





ದಿನಾಂಕ 10 ರಿಂದ 11ನೇ ಜೂನ್ 2013ರವರೆಗೆ ರಾಜ್ಯ ಕೇಂದ್ರ ಕಾರ್ಯಾಲಯದಲ್ಲಿ ರಾಜ್ಯ ಮಟ್ಟದ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು, ಜಿಲ್ಲಾ ಸಂಘಟನಾ ಆಯುಕ್ತರು ಹಾಗೂ ಜಿಲ್ಲಾ ಸಂಘಟಕರುಗಳ ಸಭೆಯಲ್ಲಿ ಭಾಗವಹಿಸಿದ ಸಿಬ್ಬಂದಿವರ್ಗ ಹಾಗೂ ರಾಜ್ಯ ಸಂಸ್ಥೆಯ ಪದಾಧಿಕಾರಿಗಳು



05 ಜೂನ್ 2013ರಂದು "ವಿಶ್ವ ಪರಿಸರ ದಿನಾಚರಣೆ" ಅಂಗವಾಗಿ ಶಾಂತಿಗೃಹದಲ್ಲಿ ಸಸಿಯನ್ನು ನೆಡುತ್ತಿರುವ ಮುಖ್ಯ ಅತಿಥಿಗಳು. ಚಿತ್ರದಲ್ಲಿ ರಾಜ್ಯ ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಮತ್ತು ಸ್ಕೌಟ್ಸ್-ಗೈಡ್ಸ್‌ಗಳನ್ನು ಕಾಣಬಹುದು.



ಹಾಸನ ಜಿಲ್ಲೆ ಅರಸೀಕೆರೆ ಸ್ಥಳೀಯ ಸಂಸ್ಥೆಯ ವತಿಯಿಂದ ಎರಡನೇ ಬಾರಿ ಶಾಸಕರಾಗಿ ಆಯ್ಕೆಯಾದ ಶ್ರೀ ಕೆ.ಎಂ. ಶಿವಲಿಂಗೇಗೌಡ ರವರನ್ನು ಅರಸೀಕೆರೆ ಸ್ಥಳೀಯ ಸಂಸ್ಥೆಗೆ ಪ್ರಧಾನ ಪೋಷಕರಾಗಿ ಆಯ್ಕೆ ಮಾಡಿ ಸನ್ಮಾನಿಸುತ್ತಿರುವುದು. ಚಿತ್ರದಲ್ಲಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಜೆ.ಎಲ್. ಲೀಲಾ ಮಹೇಶ್ವರ್, ಎ.ಡಿ.ಸಿ. (ಸ್ಕೌಟ್ಸ್) ಶ್ರೀ ವಿಷ್ಣುಮೂರ್ತಿ ಭಟ್ ಮತ್ತು ಇತರರನ್ನು ಕಾಣಬಹುದು.



ಜೂನ್ 05 2013ರಂದು ರಾಯಚೂರು ಜಿಲ್ಲಾ ಸಂಸ್ಥೆ ಹಾಗೂ ಬಸವಶ್ರೀ ಶಾಲೆಯ ಸಂಯುಕ್ತಾಶ್ರಯದಲ್ಲಿ ಜರುಗಿದ "ವಿಶ್ವ ಪರಿಸರ ದಿನಾಚರಣೆ"ಯ ಉದ್ಘಾಟನೆಯನ್ನು ಶ್ರೀಮತಿ ಆರ್. ಇಂದಿರಾ ಜಿಲ್ಲಾ ವಯಸ್ಕರ ಶಿಕ್ಷಣಾಧಿಕಾರಿ ಹಾಗೂ ಜಿಲ್ಲಾ ಸ್ಥಾನಿಕ ಆಯುಕ್ತೆ (ಗೈಡ್ಸ್) ಮತ್ತು ಬಿ. ಮಲ್ಲಿಕಾರ್ಜುನ್ ಕ್ಷೇತ್ರ ಶಿಕ್ಷಣಾಧಿಕಾರಿಗಳು ನೆರವೇರಿಸಿದರು. ಚಿತ್ರದಲ್ಲಿ ಶ್ರೀ ಕೆ. ತಿಮ್ಮಯ್ಯ ಜಿ.ಮು.ಆ., ಶ್ರೀಮತಿ ಅಜೀಜಾ ಸುಲ್ತಾನ್ ಜಿ.ಆ. (ಗೈ), ಶ್ರೀ ಅಮರೇಗೌಡ ಪಾಟೀಲ್ ಜಿಲ್ಲಾ ಕಾರ್ಯದರ್ಶಿ ಇತರ ಜಿಲ್ಲಾ ಪದಾಧಿಕಾರಿಗಳಿದ್ದಾರೆ



ಜೂನ್ 05 2013ರಂದು ಬೆಳಗಾವಿ ಜಿಲ್ಲೆ ಗೋಕಾಕ್‌ನಲ್ಲಿ ಜರುಗಿದ "ವಿಶ್ವ ಪರಿಸರ ದಿನಾಚರಣೆ"ಯನ್ನು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಜೋಡಗೇರಿ ಸಸಿಗೆ ನೀರೆರೆಯುವ ಮೂಲಕ ಉದ್ಘಾಟಿಸಿದರು. ಚಿತ್ರದಲ್ಲಿ ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಅನುಪಾ ಕೌಶಿಕ್ ದೈ.ಶಿ. ಸಂಯೋಜಕರಾದ ಶ್ರೀ ಸೂಲೇಗಾವಿ, ಜಿಲ್ಲಾ ಕಾರ್ಯದರ್ಶಿ ಶ್ರೀಮತಿ ಲಕ್ಷ್ಮೀಮಂಗಿ, ಎ.ಎಸ್.ಓ.ಸಿ. ಶ್ರೀ ನಾಗೇಶ್ ಶಿವಪೂರ ಶಿಕ್ಷಣ ಸಂಯೋಜಕರಾದ ಶ್ರೀ ಭಜಂತ್ರಿ ಇತರರನ್ನು ಕಾಣಬಹುದು.

# *Editorial*

The professionalism is the hall mark of effective Scout/Guide movement and our history speaks as to how the veterans / professionals of the Bharat Scouts & Guides committed themselves & contributed to the growth of the movement. I remember personally some of them - who used to be on the run for the sake of Scouting / Guiding and their only aim being to serve young people. If our movement is standing tall even after a century, it is because of the basic fundamentals, strong working system, great leaders and also the professionals.

In recent times I met and was inspired by a professional who is a Scout in spirit rather than a professional. Now time has come for him to say good bye to the profession. He is none other than Mr. Abdulla Rasheed,the outgoing Regional Director of WOSM / APR. In 2010 when he met all professionals and top leaders from Karnataka BS&G during APR Summit he left behind a trail in Bangalore for other professionals of Scouting / Guiding. In simple words he made his mark in the region by walking hand in hand with all countries / NSO's and various committees, his relations with India were / are always at its best. Along with this he always keeps values of Scouting intact and never compromised.

His innovative leadership and exploring new ventures for betterment of Scout movement are worth to emulate. He always remains as one of the creator of milestones in the APR and we also hope the new APR Director Mr. J. Rizal C. Pangilinan who has rich experience of over a couple of decades, will also come up to regional expectations. The handing over report of Rasheed has been most impressive and comprehensive which gave minute details - priorities wise and area wise.

My dream is to bring in such professionalism in our state of Karnataka BS&G. We have good resources and support from all over and we also have senior leaders who can be background supporters of Professional team and what we need now is team of efficient professionals.

**M.A. KHALID**
State Secretary

# ರಾಜ್ಯ ಮುಖ್ಯ ಆಯುಕ್ತರ ನುಡಿ..............................

ಆತ್ಮೀಯರೆ,

ಇತ್ತೀಚೆಗೆ ಉತ್ತರಾಖಂಡ್ ರಾಜ್ಯದಲ್ಲಿ ಆದಂತಹ "ಜಲಪ್ರಳಯ"ದ ದುರಂತದಲ್ಲಿ ಮಡಿದಿರುವ ಸಹಸ್ರಾರು ಜನರಿಗೆ ಕರ್ನಾಟಕ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಪರವಾಗಿ ಗೌರವಪೂರ್ವಕ ಶ್ರದ್ಧಾಂಜಲಿ ಅರ್ಪಿಸುತ್ತೇನೆ. ದಿನನಿತ್ಯ ಬರುತ್ತಿರುವ ಸುದ್ದಿ-ಸಮಾಚಾರ, ವರದಿಗಳನ್ನು ನೋಡಿದಾಗ ಉತ್ತರಾಖಂಡ್‌ನಲ್ಲಿ ಆಗಿರುವ ಅನಾಹುತಗಳು ದಿಗ್ಭ್ರಮೆಗೊಳಿಸುತ್ತವೆ. ರಾಜ್ಯ ಸರ್ಕಾರಗಳು ಮತ್ತು ಕೇಂದ್ರ ಸರ್ಕಾರ, ಮಿಲಿಟರಿ ಹಾಗು ವಾಯು ಪಡೆಗಳಿಗೆ ಸೇರಿದ ನೂರಾರು ಸೈನಿಕರುಗಳು, ಕಮಾಂಡೊಗಳು ಹಗಲಿರುಳೂ ಕಳೆದೆರಡು ವಾರಗಳಿಂದ ಅವಿರತವಾಗಿ ಕಾರ್ಯಪ್ರವೃತ್ತರಾಗಿದ್ದರೂ - ಇನ್ನು ಸಹಸ್ರಾರು ಜನರು ವಿವಿದ ಬೆಟ್ಟಗುಡ್ಡಗಳಲ್ಲಿ ಅನ್ನ ಆಹಾರಗಳ ಕೊರತೆಯಿಂದ ನರಳುತ್ತಿರುವ ಭಯಾನಕವಾದ ವರದಿಗಳು ನಿಜಕ್ಕೂ ಅತ್ಯಂತ ದುರದೃಷ್ಟಕರ. ಇತ್ತೀಚಿನ ವರ್ಷಗಳಲ್ಲಿ ರಾಷ್ಟ್ರ ಕಂಡರಿಯದ ಬಹುದೊಡ್ಡ ರಾಷ್ಟ್ರೀಯ ದುರಂತ ಈಗ ಆಗಿರುವ ಉತ್ತರಾಖಂಡ್ ಜಲಪ್ರಳಯದ ಅನಾಹುತಗಳು. ಈ ಬಗ್ಗೆ ರಾಷ್ಟ್ರೀಯ ಸಂಸ್ಥೆಯವರು ನಮಗೆ ಒಂದು ಸುತ್ತೋಲೆ ಕಳುಹಿಸಿ - ಈಗಾಗಲೇ ಉತ್ತರಾಖಂಡ್ ರಾಜ್ಯ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಈ ಬಗ್ಗೆ ಸ್ಥಾಪಿಸಿರುವ ಪರಿಹಾರ ನಿಧಿಗೆ - "ಹಣದ ರೂಪದಲ್ಲಿ - ಔಷಧಿಗಳ ರೂಪದಲ್ಲಿ ಹಾಗು ಬಟ್ಟೆಗಳನ್ನು ನೀಡುವ ಮೂಲಕ ಸಹಾಯ - ಸಹಕಾರ ನೀಡಬೇಕೆಂದು ಸೂಚಿಸಿರುತ್ತಾರೆ. ನಾವು ಕೂಡ ಈ ಬಗ್ಗೆ ರಾಜ್ಯದ ಎಲ್ಲಾ ಜಿಲ್ಲಾ ಸಂಸ್ಥೆಗಳಿಗೆ ಸುತ್ತೋಲೆ ನೀಡಿ ಸ್ಕೌಟ್ಸ್-ಗೈಡ್ಸ್‌ಗಳಿಂದ- ಪೋಷಕರಿಂದ - ಸಾರ್ವಜನಿಕರಿಂದ, ಸಂಘ-ಸಂಸ್ಥೆಗಳಿಂದ - ಕೈಗಾರಿಕೋದ್ಯಮಿಗಳಿಂದ - ವಿದ್ಯಾ ಸಂಸ್ಥೆಗಳಿಂದ ಹಣ ಸಂಗ್ರಹಿಸಿ ಉತ್ತರಾಖಂಡ್ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಕಳುಹಿಸಿಕೊಡಲು ಕೋರಿರುತ್ತೇವೆ. ಇದರ ಪ್ರತಿಯನ್ನು ಈ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ. ಆದುದರಿಂದ ಸ್ಥಳೀಯ ಹಾಗು ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳಲ್ಲಿ ನನ್ನ ಮನವಿ, ದಯಮಾಡಿ ಅತ್ಯಂತ ಸಂಕಷ್ಟದಲ್ಲಿರುವ ಉತ್ತರಾಖಂಡ್‌ದಲ್ಲಿ ಜಲಪ್ರಳಯಕ್ಕೆ ಸಿಲುಕಿ-ನಲುಗಿರುವವರ ಸಂಕಷ್ಟಗಳಲ್ಲಿ ಭಾಗಿಯಾಗಲು ಆದಷ್ಟು ಜಾಗ್ರತೆ ಸಂಸ್ಥೆಯ ಅಭಿಮಾನಿಗಳಿಂದ ಹಾಗು ಇತರರುಗಳಿಂದ ಹಣ ಸಂಗ್ರಹಿಸಿ ನೇರವಾಗಿ ಡಿ.ಡಿ. ಮುಖೇನ ಉತ್ತರಾಖಂಡ್ ರಾಜ್ಯ ಸಂಸ್ಥೆಗೆ ಕಳುಹಿಸಿ ರಾಜ್ಯ ಕಾರ್ಯಾಲಯಕ್ಕೆ ಸಂಗ್ರಹಿಸಿದ ಹಣದ ವಿವರಗಳನ್ನು ಹಾಗು ಡಿ.ಡಿ. ಜೆರಾಕ್ಸ್ ಪ್ರತಿಯೊಂದಿಗೆ ಕಳುಹಿಸಬೇಕೆಂದು ಕೋರುತ್ತೇನೆ.

ರಾಜ್ಯ ಸಂಸ್ಥೆಯ ಪ್ರಕಟಣೆಗಳ ಸಮಿತಿಯ ಅಧ್ಯಕ್ಷರೂ ಹಾಗು ರಾಜ್ಯದ ಹಿರಿಯ ಜಾನಪದ ತಜ್ಞರು, ಕರ್ನಾಟಕ ಜಾನಪದ ಅಕಾಡಮಿಯ ನಿಕಟಪೂರ್ವ ಅಧ್ಯಕ್ಷರೂ ಹಾಗು ಸಾಮಾಜಿಕ ಸಾರ್ವಜನಿಕ ಕ್ಷೇತ್ರಗಳಲ್ಲಿ ಕಳೆದ ಐದು ದಶಕಗಳಿಗೂ ಹೆಚ್ಚು ಕಾಲ ತಮ್ಮ ಕ್ರಿಯಾಶೀಲ ಮಾರ್ಗದರ್ಶನದ ಮೂಲಕ ಸಹಸ್ರಾರು ಯುವಕ-ಯುವತಿಯರಿಗೆ ಸದಾಕಾಲ ಮೌಲಿಕ ಆದರ್ಶ ಹಾಗು ಚಿಂತನೆಗಳನ್ನು ಮೈಗೂಡಿಸಿಕೊಳ್ಳಲು ಪ್ರೇರೇಪಿಸುತ್ತಿರುವ ಹಿರಿಯ-ಚೇತನ ಶ್ರೀ ಗೊ.ರು. ಚನ್ನಬಸಪ್ಪ ಅವರಿಗೆ, ಅವರು ಕರ್ನಾಟಕ ಜಾನಪದ ಕ್ಷೇತ್ರಕ್ಕೆ ಸಲ್ಲಿಸಿದ ವಿಶೇಷ ಸೇವೆಗಾಗಿ ದಿನಾಂಕ 28 ಮೇ 2013ರಂದು ಭಾರತದ ರಾಷ್ಟ್ರಪತಿ ಶ್ರೀ ಪ್ರಣಬ್ ಮುಖರ್ಜಿ ಅವರು ರಾಷ್ಟ್ರಪತಿ ಭವನದಲ್ಲಿ ಜರುಗಿದ ಸಮಾರಂಭದಲ್ಲಿ 2012ನೇ ಸಾಲಿನ **ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿ** ನೀಡಿ ಗೌರವಿಸಿರುತ್ತಾರೆ. ಕರ್ನಾಟಕದ ಸ್ಕೌಟ್-ಗೈಡ್ ಚಳವಳಿಯಲ್ಲಿ ಕಳೆದ ನಾಲ್ಕು ದಶಕಗಳಿಗೂ ಹೆಚ್ಚು ಕಾಲ ಸಂಸ್ಥೆಯ ಎಲ್ಲ ಪ್ರಕಟಣೆಗಳಲ್ಲಿ ಸೂಕ್ತ ಮಾರ್ಗದರ್ಶನ ಮಾಡಿ. ಸಭೆ-ಸಮಾರಂಭ ಹಾಗೂ ವಾರ್ಷಿಕ ಸಭೆಗಳಲ್ಲಿ ಭಾಗವಹಿಸಿ ತಮ್ಮ ಸುಲಲಿತ ಮೌಲಿಕ ವಿಚಾರಧಾರೆಯ ಮೂಲಕ ತಮ್ಮ ಸಾಮಾಜಿಕ ಕಳಕಳಿಯನ್ನು ಉಪಸ್ಥಿತರುಗಳ ಹೃದಯಕ್ಕೆ ನೇರವಾಗಿ ಮುಟ್ಟಿ - ಸಂಸ್ಥೆಯ ಬೆಳವಣಿಗೆಗೆ ಮಾರ್ಗದರ್ಶನ ಮಾಡಿರುತ್ತಾರೆ. ಶ್ರೀ ಗೊ.ರು. ಚನ್ನಬಸಪ್ಪನವರು ರಾಷ್ಟ್ರೀಯ ಪುರಸ್ಕಾರದ ಗೌರವವನ್ನು ಪಡೆದ ಶುಭ ಸಂದರ್ಭದಲ್ಲಿ ಕರ್ನಾಟಕದ ಎಲ್ಲಾ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್, ರೋವರ್ಸ್-ರೇಂಜರ್ಸ್, ದಳ ನಾಯಕರುಗಳು ಹಾಗು ನಾಯಕಿಯರುಗಳು ಚಳವಳಿಯ ವಿವಿಧ ಹಂತದ ಪದಾಧಿಕಾರಿಗಳ ಪರವಾಗಿ ಹೃತ್ಪೂರ್ವಕವಾದ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ದಯಾಮಯನಾದ ಭಗವಂತನು ಅವರಿಗೆ ಸದಾಕಾಲ ಸುಖ-ಸಂತೋಷ-ನೆಮ್ಮದಿ ಆರೋಗ್ಯವನ್ನು ನೀಡಿ ಸಮಾಜದ ಸ್ವಾಸ್ತವನ್ನು ಉತ್ತಮ ಪಡಿಸುವ ಅವರ ಚಿಂತನೆಗಳಿಗೆ ಸ್ಪಂದಿಸಲಿ ಎಂದು ಪ್ರಾರ್ಥಿಸುತ್ತೇನೆ.

ಈ ವರ್ಷದ ಮಾರ್ಚ್‌ನಿಂದ ಜೂನ್‌ವರೆವಿಗೆ ರಾಜ್ಯದ 16 ಜಿಲ್ಲೆಗಳಿಗೆ, ನಾನು ಮತ್ತು ಸಹೋದ್ಯೋಗಿಗಳು ಭೇಟಿ ನೀಡಿ 2012-13ರಲ್ಲಿ ಈಗಾಗಲೇ ಆಗಿರುವ ಕೆಲಸ ಕಾರ್ಯಗಳ ವಿಚಾರ ವಿನಿಮಯ ಮಾಡಿ 2013-14ರಲ್ಲಿ ಸ್ಥಳೀಯ, ಜಿಲ್ಲಾ ಹಾಗು ರಾಜ್ಯ ಸಂಸ್ಥೆ ಜರುಗಿಸಬೇಕಾಗಿರುವ ತರಬೇತಿಗಳು, ಕಾರ್ಯಕ್ರಮಗಳು, ಸಮುದಾಯ ಅಭಿವೃದ್ಧಿ ಶಿಬಿರಗಳು, ಸ್ಥಳೀಯ ಮತ್ತು ಜಿಲ್ಲಾ ರ್‍ಯಾಲಿಗಳು ಹಾಗು ಸಮಾಜದಲ್ಲಿ ಉತ್ತಮ ಸ್ವಾಸ್ಥವನ್ನು ಕಾಪಾಡುವಲ್ಲಿ

ನಾವುಗಳು ನಿರ್ವಹಿಸಬೇಕಾದ ಕೆಲಸ ಹಾಗು ಜವಾಬ್ದಾರಿಗಳ ಬಗ್ಗೆ ಚರ್ಚಿಸಿ ಸೂಕ್ತ ಸಲಹೆ- ಸೂಚನೆ- ಮಾರ್ಗದರ್ಶನ ನೀಡಿರುತ್ತೇವೆ. ಆದುದರಿಂದ ನನ್ನ ಸಹೋದ್ಯೋಗಿಗಳಲ್ಲಿ ನನ್ನ ಮನವಿ ಏನೆಂದರೆ, ಈಗಾಗಲೇ ರಾಷ್ಟ್ರೀಯ ಸಂಸ್ಥೆ ಹಾಗು ರಾಜ್ಯ ಸಂಸ್ಥೆ ನೀಡಿರುವ ಹಲವಾರು ಸುತ್ತೋಲೆಗಳ ಪ್ರಕಾರ ಚಳವಳಿಯಲ್ಲಿ ಕಾರ್ಯಪ್ರವತ್ತರಾಗಿರುವ ನಾವೆಲ್ಲರೂ ಇನ್ನು ಹೆಚ್ಚು ಕ್ರಿಯಾತ್ಮಕವಾಗಿ ನಮ್ಮಗಳ ಕರ್ತವ್ಯ ಹಾಗು ಜವಾಬ್ದಾರಿಗಳನ್ನು ನಿರ್ವಹಿಸಿದಲ್ಲಿ ಈ ವರ್ಷದಲ್ಲಿ 2013-14ನೇ ಸಾಲಿನಲ್ಲಿ ನಾವುಗಳ ಯೋಚಿಸಿ ಯೋಜಿಸಿರುವ ತರಬೇತಿಗಳನ್ನು, ಕಾರ್ಯಕ್ರಮಗಳನ್ನು, ಸಮುದಾಯ ಸೇವಾ ಶಿಬಿರಗಳನ್ನು, ರ್‍ಯಾಲಿಗಳನ್ನು ಆಯೋಜಿಸುವುದು ಕಷ್ಟವಾಗುವುದಿಲ್ಲವೆಂಬ ದೃಢ ವಿಶ್ವಾಸ, ನಂಬಿಕೆ ನನಗಿದೆ. ಆದುದರಿಂದ ದಯಾಮಯನಾದ ಭಗವಂತನು ನಮ್ಮಗಳಿಗೆ ನೀಡಿರುವ ಸದಾವಕಾಶವನ್ನು ಸದುಪಯೋಗ ಪಡಿಸಿಕೊಂಡು ಹೆಚ್ಚೆಚ್ಚು ಕಾರ್ಯಶೀಲರಾಗೋಣ ಎಂದು ಸೂಚಿಸುತ್ತೇನೆ.

ದಿನಾಂಕ 18 ಜೂನ್ 2013 ರಂದು ಸಂಜೆ ನಾನು ಹಾಗು ಸಹೋದ್ಯೋಗಿಗಳಾದ ಶ್ರೀ ಎಂ.ಎ. ಚೆಲ್ಲಯ್ಯ, ಶ್ರೀ ಚಿನ್ನಸ್ವಾಮಿರೆಡ್ಡಿ, ಶ್ರೀಮತಿ ಜಾನಕಿವೇಣುಗೋಪಾಲ್ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರಾದ ಸನ್ಮಾನ್ಯ ಶ್ರೀ ಎಸ್.ಆರ್. ಉಮಾಶಂಕರ್ ಹಾಗು ಪ್ರೌಢ ಶಿಕ್ಷಣ ನಿರ್ದೇಶಕಿಯಾದ ಶ್ರೀಮತಿ ವೀಣಾನಾಯಕ್ ಹಾಗು ಪ್ರಾಥಮಿಕ ಶಿಕ್ಷಣ ನಿರ್ದೇಶಕರಾದ ಶ್ರೀ ಎ. ದೇವಪ್ರಕಾಶ್, ಶ್ರೀ ಎಸ್.ಪಿ. ಕಾಗಲೆ, ಜಂಟೀ ನಿರ್ದೇಶಕರು (ಪ್ರಭಾರಿ) ದೈಹಿಕ ಶಿಕ್ಷಣ ಹಾಗು ಡಿ.ಎಸ್.ಇ.ಆರ್.ಟಿ. ನಿರ್ದೇಶಕರ ಪರವಾಗಿ ಆಗಮಿಸಿದ್ದ ಶ್ರೀ ಗಂಗಮಾರೇಗೌಡ ಅವರುಗಳೊಂದಿಗೆ ಸ್ಕೌಟ್-ಗೈಡ್ ಚಳವಳಿ ರಾಜ್ಯದ ಎಲ್ಲಾ ಶಾಲೆಗಳಿಗೆ ತಲುಪಲಿಕ್ಕೆ ಬೇಕಾದ ಹಲವಾರು ಸುತ್ತೋಲೆಗಳು, ನಿರ್ದೇಶನಗಳು, ಸರ್ಕಾರಕ್ಕೆ ಸಲ್ಲಿಸಬೇಕಾದ ಪ್ರಸ್ತಾವನೆಗಳು, ಇಲಾಖೆಯಿಂದ ಚಳವಳಿಯಲ್ಲಿ ಜಿಲ್ಲಾ ಸಂಘಟಕರುಗಳಾಗಿ ಕರ್ತವ್ಯ ನಿರ್ವಹಿಸಲು ಬೇಕಾದ ಆದೇಶಗಳು, ಜಿಲ್ಲೆಗಳ ಉಪನಿರ್ದೇಶಕರುಗಳು ಹಾಗು ಡಯಟ್ ಪ್ರಾಂಶುಪಾಲರುಗಳಿಗೆ ನೀಡಬೇಕಾದ ಸುತ್ತೋಲೆಗಳು, ಸ್ಕೌಟ್-ಗೈಡ್ ಸಮವಸ್ತ್ರಗಳಿಗೆ ಬೇಕಾಗಿರುವ ಹಣವನ್ನು ನೀಡಲು ಕೋರಿಕೆ ಹಾಗು ಸಂಸ್ಥೆಯಲ್ಲಿ ನಿಸ್ವಾರ್ಥವಾಗಿ ಸೇವೆ ಸಲ್ಲಿಸುತ್ತಿರುವ 12,000ಕ್ಕೂ ಹೆಚ್ಚು ಕಬ್‌ಮಾಸ್ಟರ್ಸ್, ಸ್ಕೌಟ್ ಮಾಸ್ಟರ್ಸ್, ಫ್ಲಾಕ್ ಲೀಡರ್ಸ್, ಗೈಡ್ ಕ್ಯಾಪ್ಟನ್ ಅವರುಗಳಿಗೆ ಲಭ್ಯವಿರುವ ಪದಕ ಪುರಸ್ಕಾರಗಳಿಗೆ ಅನುಗುಣವಾಗಿ ಮಾಹೆಯಾನ ವಿಶೇಷ ಭತ್ಯೆ ನೀಡುವ ಬಗ್ಗೆ ಸಮಾಲೋಚನೆ ಮಾಡಿದ್ದೇವೆ. ಮಾನ್ಯ ಆಯುಕ್ತರ ಕಚೇರಿಯು ನಾವು ಚರ್ಚಿಸಿದ ಹಲವಾರು ಪ್ರಮುಖ ವಿಷಯಗಳ ಬಗ್ಗೆ ಸದ್ಯದಲ್ಲಿಯೇ ಸುತ್ತೋಲೆ ಆದೇಶಗಳನ್ನು ನೀಡುವರೆಂಬ ಭಾರವಸೆ ಇದೆ.

ಮೇಲ್ಕಂಡ ಸಭೆ ನಡೆಸಿ ಸೂಕ್ತ ಮಾರ್ಗದರ್ಶನ ಮಾಡಿ ಚಳವಳಿಯ ಅಭಿವೃದ್ಧಿಗೆ ಹಲವಾರು ಸಲಹೆ ಸೂಚನೆ ನೀಡಿದ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರಾದ ಶ್ರೀ ಎಸ್.ಆರ್. ಉಮಾಶಂಕರ್ ಅವರಿಗೆ ಹಾಗು ಇಲಾಖೆಯ ನಿರ್ದೇಶಕರುಗಳಿಗೆ ಹಾಗು ಇತರ ಅಧಿಕಾರಿಗಳಿಗೆ ರಾಜ್ಯ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ಧನ್ಯವಾದಗಳು.

2013–14ನೇ ಸಾಲಿನ ಸ್ಕೌಟ್-ಗೈಡ್, ಕಬ್-ಬುಲ್‌ಬುಲ್ ಚಟುವಟಿಕೆಗಳು ಪ್ರಾರಂಭವಾಗಿವೆ. ನಾವುಗಳೇ ತಯಾರಿಸಿ ಒಪ್ಪಿರುವ ಈ ವರ್ಷದ ಎಲ್ಲಾ ತರಬೇತಿಗಳು, ಕಾರ್ಯಕ್ರಮಗಳು, ರ್‍ಯಾಲಿಗಳು, ಸಮಾವೇಶಗಳು, ಸಮುದಾಯ ಅಭಿವೃದ್ಧಿ ಶಿಬಿರಗಳು ಹಾಗು ರಾಷ್ಟ್ರೀಯ ಮತ್ತು ರಾಜ್ಯ ಸರ್ಕಾರದ ಯೋಜಿತ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಚಳವಳಿಯ ಬೆಳವಣಿಗೆಯಲ್ಲಿ ಪಾಲ್ಗೊಳ್ಳೋಣ ಎಂದು ಕೋರುತ್ತೇನೆ.

ತಮ್ಮ ವಿಶ್ವಾಸಿ

[signature]

ಕೊಂಡಜ್ಜಿ ಬ. ಷಣ್ಮುಖಪ್ಪ

---

## "FOOT PRINTS OF GUIDING"

The above Book Complied **Mrs. Maithily Sampth,** Former Asst. State Commissioner (Guides) and **Miss P. Saroja,** Former Directore BS&G, New Delhi is available for Sale at Equipment Dept., **Price Rs. 80/-**

## ಶ್ರದ್ಧಾಂಜಲಿ

ಉತ್ತರಾಖಂಡ್ ರಾಜ್ಯದಲ್ಲಿ ಇತ್ತೀಚೆಗೆ ಆದಂತಹ "ಜಲಪ್ರಳಯ"ದಲ್ಲಿ ಮಡಿದಿರುವ ಸಹಸ್ರಾರು ಜನರುಗಳಿಗೆ ಕರ್ನಾಟಕ ರಾಜ್ಯ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಗೌರವಪೂರ್ವ ಶ್ರದ್ಧಾಂಜಲಿ.

# ರಾಜ್ಯ ವಾರ್ತೆ.............

## ವಿಶ್ವ ಪರಿಸರ ದಿನಾಚರಣೆ ಜೂನ್ 5, 2013 – ಶಾಂತಿ ಗೃಹ, ಬೆಂಗಳೂರು







ನಮ್ಮ ಪರಿಸರ ಮತ್ತು ಭೂಮಿ ನಮ್ಮೆಲ್ಲರ ಅತ್ಯಮೂಲ್ಯವಾದ ಆಸ್ತಿ, ಅದನ್ನು ಸಂರಕ್ಷಿಸುವುದು ನಮ್ಮೆಲ್ಲರ ಹೊಣೆ ಮಾತ್ರವಲ್ಲ ಆದ್ಯ ಕರ್ತವ್ಯ. 5-6-2013ರಂದು ವಿಶ್ವ ಪರಿಸರ ದಿನಾಚರಣೆಯಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆ ಕರ್ನಾಟಕವು, ನಮ್ಮ ಪರಿಸರವನ್ನು ರಕ್ಷಿಸುವಲ್ಲಿ ಒಂದು ವಿಶಿಷ್ಟ ಕ್ರಮಕೈಗೊಂಡು ಬಹಳ ಉತ್ಸಾಹದಿಂದ ಪರಿಸರ ದಿನವನ್ನು ಆಚರಿಸಿತು. 250 ಸ್ಕೌಟ್ಸ್, ಗೈಡ್ಸ್, ಕಬ್ಸ್, ಬುಲ್‌ಬುಲ್ಸ್, ರೋವರ್ಸ್, ರೇಂಜರ್ಸ್, ಘಟಕಗಳ ನಾಯಕ, ನಾಯಕಿಯರು ಮತ್ತು ಪದಾಧಿಕಾರಿಗಳು ಒಳಗೊಂಡಿದ್ದಈ ಸಮಾರಂಭವು ಬಹಳ ಯಶಸ್ವಿಯಾಗಿ ನೆರವೇರಿತು.

ಉದ್ಘಾಟನಾ ಕಾರ್ಯಕ್ರಮವು ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ನಂತರ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಎಲ್ಲರನ್ನೂ ಸ್ವಾಗತಿಸಿದರು. ಶ್ರೀ ಎನ್. ಶ್ರೀನಿವಾಸನ್, ಕೇಂದ್ರ ಸ್ಥಾನೀಕ ಆಯುಕ್ತರು (ಪ್ರಕಟಣೆ)ರವರು ಪರಿಸರ ದಿನಾಚರಣೆಗೆ ವಿಶ್ವ ಸಂಸ್ಥೆ ನೀಡಿದ ವಾಕ್ಯ "Think, Eat, Save" ಬಗ್ಗೆ ವಿವರಣೆ ನೀಡಿದರು. ಪರಿಸರದ ಮಹತ್ವ ತಿಳಿಸುತ್ತ ಪರಿಸರವನ್ನು ನಮಗಾಗಿ ಸಂರಕ್ಷಿಸಲು ಕೆಲವೊಂದು ಮಾರ್ಗದರ್ಶನವನ್ನು ಪ್ರತ್ಯಕ್ಷ ಉದಾಹರಣೆಗಳೊಂದಿಗೆ ಪರಿಣಾಮಕಾರಿಯಾಗಿ ನೀಡಿದರು. ಈ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀಮತಿ ಬಿ. ಸುವರ್ಣಾದೇವಿ, ಜಂಟಿ ನಿರ್ದೇಶಕರು (ಶಾಲಾ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಶ್ರೀ ಹನುಮಂತಪ್ಪ, ಸಹಾಯಕ ಹಿರಿಯ ಸಹ ನಿರ್ದೇಶಕರು (ಯೋಜನೆ) ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ರಾಜ್ಯ ಪದಾಧಿಕಾರಿಗಳು ಸಾಂಕೇತಿಕವಾಗಿ ಗಿಡನೆಟ್ಟು ನೀರೆರೆಯುವ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು.

ಶ್ರೀಮತಿ ಸುವರ್ಣಾದೇವಿಯವರು ಪ್ರಕೃತಿ ಮತ್ತು ಸಮಾಜದ ವಿವಿಧ ಆಯಾಮಗಳಲ್ಲಿನ ಅನುಭವಗಳನ್ನು ಹೇಳುತ್ತಾ ಮಕ್ಕಳಿಗೆ ಪರಿಸರದ ಬಗ್ಗೆ ಕಾಳಜಿವಹಿಸಲು ಮತ್ತು ಸಂಪನ್ಮೂಲಗಳನ್ನು ರಕ್ಷಿಸಲು ಕರೆ ನೀಡಿದರು. ಶ್ರೀಯುತ ಹನುಮಂತಪ್ಪನವರು ಮಕ್ಕಳಿಗೆ ರಂಜನೀಯವಾಗಿ ಪರಿಸರದ ಬಗ್ಗೆ ಹೇಳುತ್ತಾ ಪರಿಸರದ ಈ ವರ್ಷದ ಘೋಷವಾಕ್ಯವಾದ "ಯೋಚಿಸಿ–ಸೇವಿಸಿ–ಉಳಿಸಿ" ಇದರ ಬಗ್ಗೆ ಒತ್ತು ನೀಡುವಂತೆ ಸೂಚಿಸಿದರು. ಶ್ರೀ ಎಂ.ಎ. ಚೆಲ್ಲಯ್ಯ, ರಾಜ್ಯ ಜಂಟಿ ಕಾರ್ಯದರ್ಶಿ (ಸ್ಕೌಟ್ಸ್) ಇವರ ವಂದನಾರ್ಪಣೆಯೊಂದಿಗೆ ಸಮಾರಂಭ ಮುಕ್ತಾಯವಾಯಿತು.

ನಂತರ ಮಕ್ಕಳು ಪರಿಸರ ಜಾಗೃತಿಯನ್ನು ಮೂಡಿಸುವ ಫಲಕಗಳನ್ನು ಹೊತ್ತು ಘೋಷಣೆಗಳನ್ನು ಕೂಗುತ್ತಾ ಪಥಚಲನಕ್ಕೆ ಸಿದ್ಧರಾದರು. ರಾಜ್ಯ ಮುಖ್ಯ ಆಯುಕ್ತರು ಹಸಿರು ಬಾವುಟ ತೋರಿಸುವ ಮೂಲಕ ಪಥಚಲನಕ್ಕೆ ಚಾಲನೆ ನೀಡಿದರು. ಪಥಚಲನೆಯಿಂದ ಬಂದ ಮಕ್ಕಳಿಗೆ ಪರಿಸರ ಕುರಿತಾದ ರಸಪ್ರಶ್ನೆಯನ್ನು ಏರ್ಪಡಿಸಲಾಗಿತ್ತು.




ಭೋಜನದ ನಂತರ ಮತ್ತೊಂದು ವಿಶೇಷ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು. ಕೆ.ಆರ್.ಇ.ಡಿ.ಎಲ್. ತಾಂತ್ರಿಕ ಅಧಿಕಾರಿಯಾದ ಶ್ರೀ ರವೀಂದ್ರ ಕೋರಿಯವರು ಪರ್ಯಾಯ ವಿದ್ಯುತ್ ಶಕ್ತಿ ಮತ್ತು ಶಕ್ತಿಯ ಬಳಕೆಯಲ್ಲಿ ನಿಯಂತ್ರಣ ಹಾಗೂ ಶಕ್ತಿ ಸಂರಕ್ಷಣೆ ಕುರಿತು ಮಕ್ಕಳಿಂದ ವಿಷಯಗಳನ್ನು ಹೇಳಿಸುತ್ತಾ ಸೌರಸಾಧನ ಸಲಕರಣೆಗಳು, ಗಾಳಿಯಂತ್ರ ಹಾಗೂ ಜೈವಿಕ ತ್ಯಾಜ್ಯಗಳಿಂದ ಹಾಗೂ ಕಿರು ಜಲವಿದ್ಯುತ್ ಘಟಕಗಳ ಮೂಲಕ ಶಕ್ತಿಯನ್ನು ಸಂರಕ್ಷಿಸಲು ಸಲಹೆ ನೀಡಿದರು. ಇದಾದ ನಂತರ ಮಕ್ಕಳಿಗೆ ಪ್ರಬಂಧ ಸ್ಪರ್ಧೆ, ಚಿತ್ರಕಲಾ ಸ್ಪರ್ಧೆ ಮತ್ತು ಭಾಷಣ ಸ್ಪರ್ಧೆಯನ್ನು ನಡೆಸಲಾಯಿತು.

1. ಭಾಷಣ ಸ್ಪರ್ಧೆ – "ಪರಿಸರ ಸಂರಕ್ಷಣೆಯ ಅನಿವಾರ್ಯತೆ ಮತ್ತು ಅಗತ್ಯತೆಯನ್ನು ಪ್ರಸಾರಮಾಡುವಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪಾತ್ರ".
2. ಪ್ರಬಂಧ ಸ್ಪರ್ಧೆ – "ತಮ್ಮ ನೆರೆಯೊರೆಯ ಪರಿಸರವನ್ನು ಸಂರಕ್ಷಿಸುವಲ್ಲಿ ಸ್ಕೌಟ್ಸ್–ಗೈಡ್ಸ್‌ಗಳ ಪಾತ್ರ"
3. ಚಿತ್ರಕಲೆ – "ಪರಿಸರ ರಕ್ಷಣೆ ಮತ್ತು ಸಂರಕ್ಷಣೆ".

ಶ್ರೀಮತಿ ಜೋಹ್ರಾ ಜಬೀನ್, ಮುಖ್ಯ ಲೆಕ್ಕಪತ್ರ ಸಲಹೆಗಾರರು. ಕೆ.ಆರ್.ಇ.ಡಿ.ಎಲ್.ರವರು ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಬಹುಮಾನ ವಿತರಣೆ ಮಾಡಿದರು.

ಶ್ರೀ ಎಂ.ಎ. ಖಾಲಿದ್, ರಾಜ್ಯ ಕಾರ್ಯದರ್ಶಿ, ಶ್ರೀ ಡಿ. ವೆಂಕಟೇಶ್, ರಾಜ್ಯ ಸಹಾಯಕ ಆಯುಕ್ತರು (ಸ್ಕೌಟ್); ಶ್ರೀಮತಿ ಸುಮನ್‌ಲತಾ, ಸಹಾಯಕ ನಿರ್ದೇಶಕರು, ದಕ್ಷಿಣ ವಲಯ, ಭಾರತ್ ಸ್ಕೌಟ್ಸ್–ಗೈಡ್ಸ್; ಶ್ರೀ ಅನಲೇಂದ್ರ ಶರ್ಮ, ದಕ್ಷಿಣ ವಲಯ ಸಂಘಟನಾ ಆಯುಕ್ತರು, ಭಾರತ್ ಸ್ಕೌಟ್ಸ್–ಗೈಡ್ಸ್; ಶ್ರೀ ಬಿ.ಕೆ. ಶೇಷಾದ್ರಿ, ಜಿಲ್ಲಾ ಕಾರ್ಯದರ್ಶಿ, ಬೆಂಗಳೂರು ಉತ್ತರ; ಶ್ರೀ ಚಿನ್ನಸ್ವಾಮಿರೆಡ್ಡಿ, ಗೌರವ ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್); ಶ್ರೀಮತಿ ಎಸ್.ಕೆ. ಪ್ರಭಾ, ಶ್ರೀಮತಿ ಗೀತಾನಟರಾಜ್, ರಾಜ್ಯ ಕೇಂದ್ರ ಸ್ಥಾನಿಕ ಆಯುಕ್ತರುಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಶ್ರೀ ಎಂ. ಶ್ರೀನಿವಾಸ್, ರಾಜ್ಯ ಪರಿಷತ್ತು ಸದಸ್ಯರು, ಶ್ರೀಮತಿ ಕೃಪಾವಿಜಯ, ಶ್ರೀ ಬಿ.ಎಸ್. ಅನಂತ್, ಸಾಮಾಗ್ರಿ ಮಳಿಗೆ ಉಪ ಸಮಿತಿ ಸದಸ್ಯರು ಕಾರ್ಯಕ್ರಮದ ಯಶಸ್ಸಿಗೆ ಸಹಕರಿಸಿದರು. ಶ್ರೀಮತಿ ಜಾನಕಿ ವೇಣುಗೋಪಾಲ್, ರಾಜ್ಯ ಸಂಘಟನಾ ಆಯುಕ್ತೆ (ಗೈ), ಶ್ರೀಮತಿ ಕೆ.ಕೆ. ಲೀಲಾ, ರಾಜ್ಯ ತರಬೇತಿ ಆಯುಕ್ತೆ (ಗೈ), ಶ್ರೀ ಎ.ಎಂ. ಶಂಕರ್, ಎ.ಎಸ್.ಓ.ಸಿ., ಕಾರ್ಯಕ್ರಮವನ್ನು ಸಂಘಟಿಸಿದರು. ಶ್ರೀಮತಿ ಬಿ.ವಿ. ರಾಮಲತ, ರಾಜ್ಯ ಜಂಟಿ ಕಾರ್ಯದರ್ಶಿ (ಗೈ) ಕಾರ್ಯಕ್ರಮವನ್ನು ನಿರೂಪಿಸಿದರು.




## ರಾಜ್ಯ ಪುರಸ್ಕಾರ್ ಪರೀಕ್ಷಾ ಶಿಬಿರ

ದೊಡ್ಡಬಳ್ಳಾಪುರದ ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಹಾಗು ಶಿಬಿರ ಕೇಂದ್ರದಲ್ಲಿ ದಿನಾಂಕ 9–5–2013 ರಿಂದ 13–5–2013ರ ವರೆಗೆ ಮತ್ತು 14–5–2013 ರಿಂದ 18–5–2013ರ ವರೆಗೆ ಎರಡು ತಂಡಗಳಲ್ಲಿ ರಾಜ್ಯ ಪುರಸ್ಕಾರ್ ಪರೀಕ್ಷಾ ಶಿಬಿರ ನಡೆಸಲಾಯಿತು.

ಒಂದನೇ ತಂಡದಲ್ಲಿ ಸ್ಕೌಟ್ಸ್ ಶಿಬಿರದ ನಾಯಕರಾಗಿ ಶ್ರೀ ಆಸಂದ ಅಡಿಗ, ಎಲ್.ಟಿ.(ಎಸ್) ಮತ್ತು ಗೈಡ್ಸ್ ಶಿಬಿರದ ನಾಯಕಿಯಾಗಿ ಶ್ರೀಮತಿ ಕೆ.ವಿ. ಶಾಮಲ ಎ.ಎಲ್.ಟಿ.(ಜಿ) ಕಾರ್ಯನಿರ್ವಹಿಸಿದರು. ಈ ಶಿಬಿರದಲ್ಲಿ 261 ಸ್ಕೌಟ್‌ಗಳು, 36 ಸ್ಕೌಟರ್‌ಗಳು, 242 ಗೈಡ್‌ಗಳು ಮತ್ತು 38 ಗೈಡರ್‌ಗಳು ಪಾಲ್ಗೊಂಡಿದ್ದರು. ಶ್ರೀ ಟಿ.ಎಸ್. ಲೂಕಾಸ್, ರಾಜ್ಯ ಆಯುಕ್ತರು (ಸ್ಕೌಟ್ಸ್)ರವರು ದಿನಾಂಕ 13–5–2013 ರಂದು ಶಿಬಿರಕ್ಕೆ ಭೇಟಿ ನೀಡಿದ್ದರು.

ಎರಡನೇ ತಂಡದಲ್ಲಿ ಸ್ಕೌಟ್ಸ್ ಶಿಬಿರದ ನಾಯಕರಾಗಿ ಶ್ರೀ ಜಿಮ್ಮಿ ಸಿಕ್ವೇರ, ಎಲ್.ಟಿ.(ಎಸ್) ಮತ್ತು ಗೈಡ್ಸ್ ಶಿಬಿರದ ನಾಯಕಿಯಾಗಿ ಶ್ರೀಮತಿ ಕುಮಾರಿ ಹೊನ್ನಮ್ಮ, ಎ.ಎಲ್.ಟಿ.(ಜಿ) ಕಾರ್ಯನಿರ್ವಹಿಸಿದರು. ಈ ಶಿಬಿರದಲ್ಲಿ 171 ಸ್ಕೌಟ್‌ಗಳು, 15 ಸ್ಕೌಟರ್‌ಗಳು, 259 ಗೈಡ್‌ಗಳು, 135 ಗೈಡರ್‌ಗಳು ಪಾಲ್ಗೊಂಡಿದ್ದರು.

☆ ☆ ☆ ☆ ☆ ☆ ☆ ☆ ☆

ದಾವಣಗೆರೆ ಜಿಲ್ಲೆಯ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಹಾಗೂ ಶಿಬಿರ ಕೇಂದ್ರದಲ್ಲಿ ದಿನಾಂಕ 21–5–2013 ರಿಂದ 25–5–2013ರ ವರೆಗೆ ಹಾಗೂ 27–5–2013 ರಿಂದ 31–5–2–13ರ ವರೆಗೆ ಎರಡೂ ತಂಡಗಳಲ್ಲಿ ರಾಜ್ಯ ಪುರಸ್ಕಾರ ಪರೀಕ್ಷಾ ಶಿಬಿರ ನಡೆಸಲಾಯಿತು.

ಒಂದನೇ ತಂಡದಲ್ಲಿ ಸ್ಕೌಟ್ ಶಿಬಿರದ ನಾಯಕರಾಗಿ ಶ್ರೀ ಮೊಹಮ್ಮದ್ ತುಂಬೆ, ಎ.ಎಲ್.ಟಿ.(ಎಸ್) ಹಾಗೂ ಗೈಡ್ ಶಿಬಿರದ ನಾಯಕಿಯಾಗಿ ಶ್ರೀಮತಿ ಸಿ. ಮಂಜುಳ, ಎ.ಎಲ್.ಟಿ.(ಜಿ) ಕಾರ್ಯನಿರ್ವಹಿಸಿದರು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ದಿನಾಂಕ 24 ಮತ್ತು 25 ರಂದು ಶಿಬಿರಕ್ಕೆ ಬೇಟಿ ನೀಡಿ ಸರ್ವಧರ್ಮ ಪ್ರಾರ್ಥನೆಯಲ್ಲಿ ಪಾಲ್ಗೊಂಡು ಶಿಬಿರಾರ್ಥಿಗಳನ್ನುದ್ದೇಶಿಸಿ ಮಾತನಾಡಿದರು. ಈ ತಂಡದಲ್ಲಿ 176 ಸ್ಕೌಟ್ಸ್, 26 ಸ್ಕೌಟರ್‌ಗಳು, 141 ಗೈಡ್‌ಗಳು ಮತ್ತು 19 ಗೈಡರ್‌ಗಳು ಪಾಲ್ಗೊಂಡಿದ್ದರು.

ಎರಡನೇ ತಂಡದಲ್ಲಿ ಸ್ಕೌಟ್ ಶಿಬಿರದ ನಾಯಕರಾಗಿ ಶ್ರೀ ಜಿಮ್ಮಿ ಸೆಕ್ವೇರ್, ಎಲ್.ಟಿ.(ಎಸ್) ಹಾಗೂ ಗೈಡ್ ತಂಡದ ನಾಯಕಿಯಾಗಿ ಶ್ರೀಮತಿ ಎನ್.ಕೆ. ಛಾಯ, ಎಲ್.ಟಿ.(ಜಿ) ಕಾರ್ಯನಿರ್ವಹಿಸಿದರು. ಈ ತಂಡದಲ್ಲಿ 254 ಸ್ಕೌಟ್‌ಗಳು 43 ಸ್ಕೌಟರ್‌ಗಳು, 235 ಗೈಡ್‌ಗಳು ಹಾಗೂ 35 ಗೈಡರ್‌ಗಳು ಪಾಲ್ಗೊಂಡಿದ್ದರು.

ಶ್ರೀಮತಿ ಜಾನಕಿ ವೇಣುಗೋಪಾಲ್, ರಾಜ್ಯ ಸಂಘಟನಾ ಆಯುಕ್ತೆ (ಗೈಡ್ಸ್) ಈ ನಾಲ್ಕು ಶಿಬಿರಗಳ ಮೇಲ್ವಿಚಾರಕಾಗಿದ್ದರು ಹಾಗೂ ಶ್ರೀ ಎಂ. ಪ್ರಭಾಕರ ಭಟ್, ಎ.ಎಸ್.ಓ.ಸಿ.(ಎಸ್), ಉಡುಪಿ ಜಿಲ್ಲೆ ಇವರು ಸಂಯೋಜಕರಾಗಿದ್ದರು.

**ಎಳೆಯ ವಯಸ್ಸಿನವರು ದೈಹಿಕವಾಗಿ**

ಬೌದ್ಧಿಕವಾಗಿ, ಸಾಮಾಜಿಕವಾಗಿ ಮತ್ತು ಆಧ್ಯಾತ್ಮಿಕವಾಗಿ
ವಿಕಾಸಗೊಳ್ಳಲು ನೆರವಾಗುವ ತನ್ನ ಉದ್ದೇಶವನ್ನು ಸ್ಕೌಟ್ಸ್, ಗೈಡ್
ಚಳವಳಿ ವಿನೋದ, ವಿಹಾರಗಳ ಮೂಲಕ ಸಾಧಿಸುತ್ತದೆ.

## ಅಭಿನಂದನೆಗಳು



Mr. SWEEKAR
S/o. Shantha Murthy
Rastrapathi Scout
XV Kanteerava Scout Group
Bangalore has secured 97%
Marks II P.U.C.





Mr. G. PRASANNA SAI
S/o. G Umashankar
Xavier Shcool, Manvi,
Dist-Raichur has
secured 95% in
(CBSE Exam.,)



# The Bharat Scouts and Guides, Karnataka

## State Headquarters, Bangalore

**Appeal to all the Scouters, Guiders, Scouts, Guides, Volunteers and Well-Wishers and Supporters of the Movement to extend their Help and Support to the Flood Releif Fund for the Victims of the Uttarkhand State setup by Bharat Scouts and Guides, Uttarkhand State.**

We appeal to the General Public, Philanthropists, Industrialists and Industries, Educational Institutions, Parents, Teachers, Office-Bearers of the District and Local Associations of the Bharat Scouts and Guides of Karnataka and All the Unit Leaders, Cubs, Bulbuls, Scouts, Guides, Rovers and Rangers, Voluntary Organisations to come forward and **Contribute Generously** to this **Relief and Rehabilitation Fund** for the flood Affected Victims and the Affected Villages of Uttarakhand State,.

All Contributions and financial Aids Cloth, Medicines, should be sent to the following address who will be co-ordinating the Relief Work for the Victims of Flood Affected Areas with the Support, Help and Guidance of Uttarakhand State Government.

All Contributions should be made through **"Cheque or D.D."** only drawn in favour of the **"State Secretary, The Bharat Scouts and Guides, Uttarakhand"** and send it the following address with a copy to the State Secretary, Bharat Scouts and Guides, Fort, Bangalore-02. With details of the Donors.

Name and Address of Uttarakhand State, Bharat Scouts & Guides
**Shri Ravindra Moha Kala**
State Secretary
The Bharat Scouts and Guides
Uttarakhand State Headquarters
55, Rajpur Road, Dehradun, Uttarakhand-248 001
**Mobile No. 09837228587**

**Sd/-**
**STATE SECRETARY**

We will publish details of the Contributions made above Rs. 1000/- from **Individuals** and **Organisations** in our Monthly News Magazine

# ಜಿಲ್ಲಾ ವಾರ್ತೆಗಳು

## ಉಡುಪಿ

### ವಿಶ್ವ ಪರಿಸರ ದಿನಾಚರಣೆ

ಪರಿಸರ ಮಾಲಿನ್ಯ ನಿಯಂತ್ರಣ ಮಂಡಲಿ ಮತ್ತು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ಜಂಟಿ ಆಶ್ರಯದಲ್ಲಿ ಉಡುಪಿ ಪ್ರಗತಿನಗರ ಕಾರಂತ ಕಲಾಗ್ರಾಮದಲ್ಲಿರುವ ಸ್ಕೌಟ್-ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರದಲ್ಲಿ ವಿಶ್ವ ಪರಿಸರ ದಿನಾಚರಣೆ ನಡೆಸಲಾಯಿತು.

ಮುಖ್ಯ ಅತಿಥಿಯಾಗಿದ್ದ ಪರಿಸರ ಮಾಲಿನ್ಯ ನಿಯಂತ್ರಣ ಮಂಡಲಿಯ ಜಿಲ್ಲಾ ಪರಿಸರ ಅಧಿಕಾರಿ ಶ್ರೀ ರಾಜಶೇಖರ್ ಪುರಾಣಿಕ್ ಅವರು ಪರಿಸರದ ಮಹತ್ವವನ್ನು ವಿವರಿಸಿದರು. ಸ್ಕೌಟ್ ಗೈಡ್ಸ್‌ನ ಉಡುಪಿ ಜಿಲ್ಲಾ ಸಂಸ್ಥೆಯ ಮಹಾಪೋಷಕರಾದ, ಉದ್ಯಮಿ ಶ್ರೀ ಪಾಂಗಾಳ ರಬೀಂದ್ರ ನಾಯಕ್ ಅಧ್ಯಕ್ಷತೆ ವಹಿಸಿದ್ದರು.

ಉಪಪರಿಸರ ಅಧಿಕಾರಿ ಶ್ರೀ ಕೆ.ವಿ. ಶಿವಕುಮಾರ್ ಭಿತ್ತಿಪತ್ರ ವಿತರಿಸಿದರು. ಸ್ಕೌಟ್ ಗೈಡ್ಸ್‌ನ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ಬಿ. ರಾವ್ ಗಿಡಗಳನ್ನು ವಿತರಿಸಿದರು.

ಶ್ರೀ ಕೊಗ್ಗ ಗಾಣಿಗ, ಡಿ.ಟಿ.ಸಿ. (ಸ್ಕೌಟ್ಸ್), ಶ್ರೀ ಬಿಕ್ರಂಸಿಂಗ್, ಹೆಡ್‌ಕ್ವಾರ್ಟರ್ಸ್ ಕಮಿಷನರ್, ಎ.ಎಲ್.ಟಿ. (ರೋವರ್ಸ್), ಶ್ರೀ ರಾಜಗೋಪಾಲಾಚಾರ್ಯ, ಎ.ಎಲ್.ಟಿ. (ಕಬ್), ರೋವರ್ ಲೀಡರ್‌ಗಳಾದ ಡಾ. ಗುರುರಾಜ ಪ್ರಭು, ನಿತಿನ್ ಅಮಿನ್, ರೇಂಜರ್ ಲೀಡರ್ ಸುಷ್ಮಾ ಉಪಸ್ಥಿತರಿದ್ದರು.

ಸ್ಕೌಟ್ಸ್‌ನ ರಾಜ್ಯ ಸಹಾಯಕ ಸಂಘಟನಾ ಆಯುಕ್ತರಾದ ಶ್ರೀ ಎಂ. ಪ್ರಭಾಕರಭಟ್ ಸ್ವಾಗತಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಕಲ್ಮಾಡಿ ಶೇಖರ್ ಪೂಜಾರಿರವರು ವಂದಿಸಿದರು. ವಿವಿಧ ಶಾಲೆ ಮತ್ತು ಕಾಲೇಜಿನ ಸುಮಾರು 200ಕ್ಕೂ ಹೆಚ್ಚು ವಿದ್ಯಾರ್ಥಿಗಳು ಭಾಗವಹಿಸಿದ್ದರು ಹಾಗೂ ಜಿಲ್ಲಾ ತರಬೇತಿ ಕೇಂದ್ರದಲ್ಲಿ ಹಲವಾರು ಗಿಡಗಳನ್ನು ನೆಡಲಾಯಿತು.

## ಬೆಳಗಾವಿ

ಗೋಕಾಕ್ ನಗರದ ಕೆ.ಎಲ್.ಇ. ಶಾಲೆಯಲ್ಲಿ ದಿನಾಂಕ 5-6-2013 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಹಾಗೂ ಕೆ.ಎಲ್.ಇ. ಸ್ಕೌಟ್ಸ್-ಗೈಡ್ಸ್, ಬುಲ್‌ಬುಲ್ ತಂಡಗಳ ಸಂಯುಕ್ತಾಶ್ರಯದಲ್ಲಿ ವಿಶ್ವ ಪರಿಸರ ದಿನಾಚರಣೆಯನ್ನು ಆಚರಿಸಲಾಯಿತು.

ಈ ಸಂದರ್ಭದಲ್ಲಿ ಗೋಕಾಕ್ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಚೋಡಗೇರಿ ಸಸಿಗಳನ್ನು ನೆಟ್ಟು ನೀರುಣಿಸುವ ಮೂಲಕ ವನಮಹೋತ್ಸವಕ್ಕೆ ಚಾಲನೆ ನೀಡಿದರು. ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಅನುಪಾ ಕೌಶಿಕ್, ದೈಹಿಕ ಶಿಕ್ಷಣ ಸಂಯೋಜಕರಾದ ಶ್ರೀ ಸೂಲೇಗಾವಿ, ಗೈಡ್ಸ್ ಜಿಲ್ಲಾ ಕಾರ್ಯದರ್ಶಿ ಮಿಸ್. ಲಕ್ಷ್ಮೀಮಂಗಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಬೆಳಗಾವಿ ಸಹಾಯಕ ರಾಜ್ಯ

ಸಂಘಟನಾ ಆಯುಕ್ತರಾದ ಶ್ರೀ ನಾಗೇಶ ಶಿವಾಪೂರ, ಶಿಕ್ಷಣ ಸಂಯೋಜಕರಾದ ಶ್ರೀ ಭಜಂತ್ರಿ, ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

ವಿಶ್ವ ಪರಿಸರ ಜಾಗೃತಿಗಾಗಿ ಪ್ಲಾಸ್ಟಿಕ್ ತ್ಯಜಿಸುವುದರ ಕುರಿತು ಶಾಲೆಯ ಸ್ಕೌಟ್ ಮತ್ತು ಗೈಡ್ಸ್ ಮಕ್ಕಳು ನಾಟಕವನ್ನು ಪ್ರದರ್ಶಿಸಿದರು. ಕ್ಷೇತ್ರ ಶಿಕ್ಷಣಾಧಿಕಾರಿಗಳು ಪರಿಸರ ಸಂರಕ್ಷಣೆಯ ಕುರಿತು ಮಾತನಾಡಿದರು.

ಶಾಲೆಯ ಬುಲ್‌ಬುಲ್ ದಳದ ನಾಯಕಿ ಪ್ರತಿಭಾ ಜಾಧವ್ ಅತಿಥಿಗಳನ್ನು ಹೂಗುಚ್ಛ ನೀಡುವುದರ ಮೂಲಕ ಸ್ವಾಗತಿಸಿ, ಪರಿಚಯಿಸಿದರು, ಗೈಡ್ಸ್ ದಳದ ನಾಯಕಿ ಸುಜಾತಾ ತೊಂಡಿಕಟ್ಟಿ ವಂದನಾರ್ಪಣೆಯನ್ನು ಸಲ್ಲಿಸಿದರು.

☆ ☆ ☆ ☆ ☆ ☆ ☆ ☆ ☆

ದಿನಾಂಕ 5-6-2013 ರಂದು ಸೇಂಟ್ ಮೇರಿ ಶಾಲೆ, ಬೆಳಗಾವಿ ನಗರ ಇಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸ್ಥಳೀಯ ಹಾಗೂ ಸೇಂಟ ಮೇರಿ ಸ್ಕೌಟ್ಸ್ ಮತ್ತು ಗೈಡ್ಸ್ ತಂಡಗಳ ಸಂಯುಕ್ತಾಶ್ರಯದಲ್ಲಿ ವಿಶ್ವ ಪರಿಸರ ದಿನಾಚರಣೆಯನ್ನು ಆಚರಿಸಲಾಯಿತು.

ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಟಿ.ಪಿ. ಅಲವಾರಿಜ ಆಡಳಿತ ಮಂಡಳಿಯ ನಿರ್ದೇಶಕರಾದ ಶ್ರೀಮತಿ ಜಾಸ್ಮಿನ್ ರುಬದಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಶಿಕ್ಷಕರು ಹಾಗೂ ಬೆಳಗಾವಿ ನಗರ ವಲಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಜೆ.ಎನ್. ಫರ್ನಾಂಡಿಸ್, ಜಿಲ್ಲಾ ಸಹ ಕಾರ್ಯದರ್ಶಿಗಳಾದ ಶ್ರೀ ಎಸ್.ಎಂ. ನದಾಫ, ರಾಜ್ಯ ಸಹಾಯಕ ಸಂಘಟನಾ ಆಯುಕ್ತ ಶ್ರೀ ನಾಗೇಶ ಆರ್. ಶಿವಾಪೂರ ಹಾಗೂ ಸ್ಕೌಟ್ಸ್-ಗೈಡ್ಸ್ ಮಕ್ಕಳಿಂದ ಗೂಡಿದ ಈ ಪರಿಸರ ದಿನಾಚರಣೆ ಕಾರ್ಯಕ್ರಮದಲ್ಲಿ ಭಾಷಣ ಸ್ಪರ್ಧೆ, ನಿಬಂಧ ಸ್ಪರ್ಧೆ, ಕವಿತೆ ರಚನೆ, ಸ್ಪರ್ಧೆಗಳಲ್ಲಿ ಮಕ್ಕಳು ಉತ್ಸಾಹದಿಂದ ಭಾಗವಹಿಸಿದ್ದರು. ಸದರಿ ಗಣ್ಯ ಮಾನ್ಯರ ಹಾಗೂ ಸ್ಕೌಟ್ಸ್-ಗೈಡ್ಸ್ ಮಕ್ಕಳ ಉಪಸ್ಥಿತಿಯಲ್ಲಿ ಸಸಿ ನೆಡುವ ಕಾರ್ಯಕ್ರಮವನ್ನು ನಡೆಸಲಾಯಿತು. ಶ್ರೀ ನಾಗೇಶ್ ಆರ್. ಶಿವಾಪೂರ, ಎ.ಎಸ್.ಓ.ಸಿ. ಈ ಸಂದರ್ಭದಲ್ಲಿ ಪರಿಸರ ಸಂರಕ್ಷಣೆಯ ಬಗ್ಗೆ ಕುರಿತು ಮಾತನಾಡಿದರು.

## ಬೀದರ್

ದಿನಾಂಕ 15-05-2013 ರಂದು ಬೀದರ್ ನಗರದ ನಿಲಾಂಬಿಕಾ ಬಾಲಕಿಯರ ಪ್ರೌಢಶಾಲೆಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯು ವಿಶ್ವ ಪರಿಸರ ದಿನಾಚರಣೆ ಹಮ್ಮಿಕೊಂಡಿತ್ತು. ಕಾರ್ಯಕ್ರಮದಲ್ಲಿ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಬೀದರ್‌ರವರ ಕಾರ್ಯಾಲಯದಿಂದ ಪತ್ರಾಂಕಿತ ವ್ಯವಸ್ಥಾಪಕಾರದ ಶ್ರೀ ಗೊಂಡಬಾಬುರಾವ್, ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು ಶ್ರೀ ದೇಶಪ್ಪ, ಜಿಲ್ಲಾ ಸಂಸ್ಥೆ ಮುಖ್ಯ ಆಯುಕ್ತರಾದ ಡಾ. ಸಿದ್ಧಾರೆಡ್ಡಿ, ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಲೀಲಾವತಿ ಚಕೊತೆ, ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ಶಿವಕುಮಾರ ಹಾಲಹಳ್ಳಿ, ಪ್ರೌಢಶಾಲೆಯ ಮುಖ್ಯೋಪಾಧ್ಯಾಯಿನಿ

ಶ್ರೀಮತಿ ಸಿದ್ದಮ್ಮ, ಗೈಡ್ಸ್ ಕ್ಯಾಪ್ಟನ್ ಶ್ರೀಮತಿ ವಿದ್ಯಾವತಿ ಸಾವೆ ಹಾಗೂ ಶಾಲೆಯ ಗೈಡ್ಸ್ ಕಂಪನಿಯ ಬಾಲಕಿಯರು ಪಾಲ್ಗೊಂಡಿದ್ದರು.

ಕಾರ್ಯಕ್ರಮವು ಮೊದಲಿಗೆ ಶಾಲಾ ಆವರಣ, ಕೈ ತೋಟದ ಸ್ವಚ್ಛತೆಯಿಂದ ಆರಂಭಗೊಂಡಿತು. ಸ್ವಚ್ಛತಾ ಕಾರ್ಯಕ್ರಮಕ್ಕೆ ಜಿಲ್ಲಾ ಗೈಡ್ಸ್ ಆಯುಕ್ತೆ ಶ್ರೀಮತಿ ಲೀಲಾವತಿ ಚಕೊತೆ ಚಾಲನೆ ನೀಡಿದರು. ಜ್ಯೋತಿ ಬೆಳಗುವುದರೊಂದಿಗೆ ಡಾ. ಸಿದ್ಧಾರಡಿಯವರು ಉದ್ಘಾಟಿಸಿದರು. ನಂತರ ಶಾಲೆಯ ಮುಖ್ಯ ಗುರುಗಳು ತಮ್ಮ ಸಂಸ್ಥೆಯ ಆರಂಭ, ಗುರಿ-ಉದ್ದೇಶ ಶೈಕ್ಷಣಿಕ ಪ್ರಗತಿ, ಸ್ಕೌಟಿಂಗ್-ಗೈಡಿಂಗ್ ಪ್ರಗತಿಗಳನ್ನೊಳಗೊಂಡ ಪ್ರಾಸ್ತಾವಿಕ ನುಡಿ ನುಡಿದು ಎಲ್ಲರಿಗೂ ಸ್ವಾಗತ ಕೋರಿದರು. ನಂತರ ಮಾತನಾಡಿದ ಜಿಲ್ಲಾ ಮುಖ್ಯ ಆಯುಕ್ತರು ತಾವು 30 ವರ್ಷಗಳ ಹಿಂದೆ ಬೀದರ್ ನಗರದ ಹೃದಯ ಭಾಗದಲ್ಲಿ ರೋಟರಿ ಕ್ಲಬ್ - ಎಫ್.ಪಿ.ಎ. ಸಹಯೋಗದಲ್ಲಿ ನೆಟ್ಟ ಸಸಿಗಳು ಇಂದು ಹೆಮ್ಮರಗಳಾಗಿವೆ. ಆದ್ದರಿಂದ ಎಲ್ಲರೂ ಸಸಿ ನೆಟ್ಟು, ಪೋಷಿಸಿ ಸಮಾಜಮುಖಿ ಕಾರ್ಯಗಳಲ್ಲಿ ತೊಡಗಲು ಕರೆ ನೀಡಿದರು. ತಾನು ಅಂದು ಮಾಡಿದ ಅಳಿಲು ಸೇವೆ ಇಂದು ಜನ ಮೆಚ್ಚುಗೆಯ ಕೆಲಸವಾಗಿದೆ. ಸಸಿ ನೆಡುವುದು ನನಗೆ ಹೆಚ್ಚಿನ ಸಂತೋಷವನ್ನುಂಟು ಮಾಡುತ್ತದೆ ಎಂದರು.

ನಂತರ ಉಪನಿರ್ದೇಶಕರ ಕಾರ್ಯಾಲಯದಿಂದ ಅಥಿತಿಗಳಾಗಿ ಆಗಮಿಸಿದ ಪತ್ರಾಂಕಿತ ಸಹಾಯಕರು ಶ್ರೀಮಾನ ಗೊಂಡ ಬಾಬುರಾವ್‌ರವರು ಇಂದಿನ ಆಧುನಿಕರಣ, ಪಾಶ್ಚಾತ್ಯಾ ಸಂಸ್ಕೃತಿ ಅನುಕರಣದಿಂದ ನಾವು ಪ್ರಕೃತಿಯಿಂದ ದೂರವಾಗಿದ್ದೇವೆ. ಕಲ್ಮಶ ವಾತಾವರಣದಲ್ಲಿ ಬದುಕುತ್ತಿದ್ದೇವೆ. ನಮ್ಮ ಇಂದಿನ ಆಧುನಿಕ ಜೀವನ ಶೈಲಿ ಪ್ರಕೃತಿಗೆ ಮಾರಕವಾಗಿ ಪರಿಣಮಿಸಿದೆ ಎಂದರು. ನಂತರ ಮಾತನಾಡಿದ ಜಿಲ್ಲಾ ಗೈಡ್ಸ್ ಆಯುಕ್ತೆ ಶ್ರೀಮತಿ ಲೀಲಾವತಿ ಚಕೋತೆ ಗೈಡ್ಸ್ ಮಕ್ಕಳಿಗೆ ದಿನಾಚರಣೆಯ ಅಂಗವಾಗಿ ಶುಭಕೋರಿ ದಿನಾಚರಣೆಯ ಮಹತ್ವ ತಿಳಿಸಿದರು.

ತದನಂತರ ಶ್ರೀಯುತ ದೇಶಪ್ಪನವರು ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಬೀದರ್ ಅವರು ಇನ್ನೊರ್ವ ಅಥಿತಿ ಮಾತನಾಡುತ್ತಾ ನಮ್ಮ ಜಾನಪದ, ಸಾಹಿತ್ಯ, ಸಂಸ್ಕೃತಿ, ಆಚಾರ-ವಿಚಾರ, ನಯ-ವಿನಯತೆಯನ್ನು ನಾವು ಮರೆಯುತ್ತಿದ್ದೇವೆ. ಹಿಂದೆ ಪ್ರತಿ ಗ್ರಾಮ-ನಗರಗಳು ಸ್ವರ್ಗ ಸದೃಶ ಸೌಂದರ್ಯದಿಂದ ಕೂಡಿರುತ್ತಿದ್ದವು. ಆದರೆ, ಇಂದು ನರಕ ನಾಚಿಸುವಂತಹ ದೈತ್ಯ ನಗರಗಳಾಗಿವೆ. ಗ್ರಾಮಗಳಾಗಿವೆ. ಮನುಷ್ಯ ತನ್ನ ಅತಿಯಾದ ಸ್ವಾರ್ಥದಿಂದ ಪ್ರಕೃತಿಯನ್ನು ವಿಕೃತಿ ಮಾಡಿ ತನ್ನ ಸುಕೃತಿ ಮರೆತಿದ್ದಾನೆ. ಪರಿಸರ ರಕ್ಷಣೆಗೆ ನಾವೆಲ್ಲಾ ಬದ್ಧರಾಗಿರೋಣಾ ಎಂದು ತಿಳಿಸಿದರು.

☆ ☆ ☆ ☆ ☆ ☆ ☆ ☆ ☆

ದಿನಾಂಕ 11-5-2013 ಹಾಗೂ 13-5-2013 ರಂದು ಡಿ.ಡಿ.ಪಿ.ಐ. ಕಛೇರಿಯಲ್ಲಿ ಕ್ರಮವಾಗಿ ಶಿವಾಜಿ ಜಯಂತಿ ಹಾಗೂ ಬಸವ ಜಯಂತಿಯನ್ನು ಆಚರಿಸಲಾಯಿತು.

ಸ್ಕೌಟ್ಸ್ ಗೈಡ್ಸ್ ಮಕ್ಕಳು ಹಾಗೂ ಪೋಷಕರುಗಳು, ಈ ಕಾರ್ಯಕ್ರಮದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದರು, ಕಾರ್ಯಕ್ರಮವನ್ನು ಬಹಳ ವಿಜೃಂಭಣೆಯಿಂದ ನಡೆಸಲಾಯಿತು.

## ರಾಯಚೂರು

ದಿನಾಂಕ 5–6–2013 ರಂದು 'ವಿಶ್ವ ಪರಿಸರ ದಿನಾಚರಣೆ'ಯನ್ನು ಜಿಲ್ಲಾ ಸಂಸ್ಥೆ ಹಾಗೂ ಬಸವಶ್ರೀ ಪ್ರಾಥಮಿಕ ಮತ್ತು ಪ್ರೌಢಶಾಲೆ ರಾಯಚೂರು ಇವರುಗಳ ಸಂಯುಕ್ತಾಶ್ರಯದಲ್ಲಿ ಹಮ್ಮಿಕೊಳ್ಳಲಾಗಿತ್ತು. ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀಮತಿ ಆರ್. ಇಂದಿರಾ, ಜಿಲ್ಲಾ ವಯಸ್ಕ ಶಿಕ್ಷಣಾಧಿಕಾರಿಗಳು ಹಾಗೂ ಜಿಲ್ಲಾ ಸ್ಥಾನಿಕ ಆಯುಕ್ತರು (ಗೈ) ಸಸಿ ನೆಡುವ ಮೂಲಕ ನೆರವೇರಿಸಿದರು. ನಂತರ ಅವರು ಮಾತನಾಡಿ ಜನರಲ್ಲಿ ಪರಿಸರ ಪ್ರಜ್ಞೆ ಮೂಡಿಸುವಂತೆ ಸಲಹೆ ನೀಡಿದರು.

ಮುಖ್ಯ ಅತಿಥಿಗಳಾಗಿ ಶ್ರೀ ಜಿ. ಮಲ್ಲಿಕಾರ್ಜುನ, ಕ್ಷೇತ್ರ ಶಿಕ್ಷಣಾಧಿಕಾರಿಗಳು ರಾಯಚೂರು ಇವರು ಪರಿಸರ ದಿನಾಚರಣೆಯ ಜಾಗೃತಿ ಜಾಥಾವನ್ನು ಹಸಿರು ನಿಶಾನೆ ತೋರಿಸಿ ಚಾಲನೆ ನೀಡಿದರು.

ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಶ್ರೀ ಬಸವರಾಜ ಬೋರಡ್ಡಿ, ತಾಲ್ಲೂಕು ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ಹಾಗೂ ಜಿಲ್ಲಾ ಸಹಾಯಕ ಆಯುಕ್ತರು (ಸ್ಕೌಟ್ಸ್). ಪರಿಸರ ಸ್ವಚ್ಛತೆಯ ಬಗ್ಗೆ ಕಲ್ಪನೆ ಮಕ್ಕಳಿಗೆ ಚಿಕ್ಕಂದಿನಿಂದಲೇ ಬೆಳೆಸುವಂತೆ ಸಲಹೆ ನೀಡಿದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ಮಾತನಾಡಿ, ಪ್ರತಿಯೊಬ್ಬರೂ ತಮ್ಮ ಸುತ್ತಮುತ್ತಲಿನ ಪರಿಸರವನ್ನು ಸ್ವಚ್ಛಮಾಡಿಕೊಳ್ಳಬೇಕು. ನೀರು ವಿದ್ಯುತ್ ಬಳಕೆಯನ್ನು ಮಿತವಾಗಿ ಮಾಡಿ ಪರಿಸರ ಸಮತೋಲನ ಕಾಪಾಡಿಕೊಳ್ಳಬೇಕು ಎಂದರು.

ಈ ಕಾರ್ಯಕ್ರಮದಲ್ಲಿ ಶ್ರೀಮತಿ ಅಜೀಜಾ ಸುಲ್ತಾನ, ಜಿಲ್ಲಾ ಆಯುಕ್ತರು (ಗೈಡ್ಸ್), ಶ್ರೀ ಅಮರೇಗೌಡ ಪಾಟೀಲ್, ಕಾರ್ಯದರ್ಶಿಗಳು, ಆಲಿಯಾ ಖಾನುಂ, ಜಂಟಿ ಕಾರ್ಯದರ್ಶಿಗಳು, ಶ್ರೀ ಆರ್.ಹೆಚ್. ಸಾಗರ್, ಕಾರ್ಯದರ್ಶಿಗಳು ಸ್ಥಳೀಯ ಸಂಸ್ಥೆ, ಶ್ರೀಮತಿ ಲಲಿತಾ ಬಸನಗೌಡ ಬಸವಶ್ರೀ ಶಾಲೆಯ ಸಂಸ್ಥಾಪಕರು. ಸುಧಾ ಜಿ., ಜಿಲ್ಲಾ ಸಂಘಟನಾ ಆಯುಕ್ತರು (ಗೈ) ನಾಗರತ್ನ ಪಾಟೀಲ್ ಹಾಗೂ ಶಾಲೆಯ ಶಿಕ್ಷಕ ವೃಂದದವರು ಉಪಸ್ಥಿತರಿದ್ದರು.

ಜಿಲ್ಲಾ ಸಂಘಟನಾ ಆಯುಕ್ತರು (ಸ್ಕೌ) ಶ್ರೀ ರಾವುತ್‌ರಾವ್ ಬರೂರು ಎಲ್ಲರನ್ನು ಸ್ವಾಗತಿಸಿ ಕಾರ್ಯಕ್ರಮ ನಡೆಸಿಕೊಟ್ಟರು. ಕುಮಾರಿ ವಿಜಯಲಕ್ಷ್ಮೀ ಸಹ ಶಿಕ್ಷಕಿಯರು ವಂದಿಸಿದರು.

## ಮೈಸೂರು

ದಿನಾಂಕ 10–4–2013 ರಂದು ಮಲ್ಲಮ್ಮ ಮರಿಮಲ್ಲಪ್ಪ ಮಹಿಳಾ ಕಲಾ ಮತ್ತು ವಾಣಿಜ್ಯ ಕಾಲೇಜಿನಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ (ರೇಂಜರ್) ಮತ್ತು ಯೂತ್ ರೆಡ್ ಕ್ರಾಸ್ ಘಟಕಗಳ ಉದ್ಘಾಟನಾ ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು.

ಸಮಾರಂಭದ ಅಧ್ಯಕ್ಷತೆಯನ್ನು ಮರಿಮಲ್ಲಪ್ಪ ವಿದ್ಯಾ ಸಂಸ್ಥೆಯ ಗೌರವ ಕಾರ್ಯದರ್ಶಿಗಳು ಹಾಗೂ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಕೆ.ಎಸ್. ಪಂಚಾಕ್ಷರ ಸ್ವಾಮಿಯವರು ವಹಿಸಿದ್ದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಡಾ. ಕಮಲಾರಾಮನ್, ಜಿಲ್ಲಾ ಆಯುಕ್ತರು (ಗೈಡ್ಸ್), ಮೈಸೂರು ಇವರು ಸ್ಕೌಟ್ಸ್ ಮತ್ತು ಗೈಡ್ಸ್‌ನ ಹಿನ್ನೆಲೆ ತಿಳಿಸುತ್ತಾ, ಪರಿಸರ ಸ್ವಚ್ಛತೆ ಶಿಸ್ತು, ಸಹನೆ, ಸಹಬಾಳ್ವೆ, ರಕ್ಷಣೆ ಮುಂತಾದ ಕಾರ್ಯಗಳಲ್ಲಿ ವಿದ್ಯಾರ್ಥಿಗಳು ತೊಡಗಲು ಇದು ತಳಪದಿಯಾಗಿದೆ ಎಂದು ತಿಳಿಸಿದರು.

ಸ್ಕೌಟ್ಸ್ ಮತ್ತು ಗೈಡ್ಸ್‌ನ ಜಿಲ್ಲಾ ಕಾರ್ಯದರ್ಶಿಯಾದ ಡಾ. ಗುರುಮೂರ್ತಿಯವರು, ರೇಂಜರ್ಸ್ ಘಟಕವು ಸ್ತ್ರೀಯರಲ್ಲಿ ರಕ್ಷಣೆಯ ಕವಚನವನ್ನು ಒದಗಿಸುವುದು ಎಂದು ತಿಳಿಸುತ್ತಾ ಇದರ ನೀತಿ, ನಿಯಮ ಹಾಗೂ ಒಬ್ಬ ವ್ಯಕ್ತಿಯು ಉತ್ತಮವಾಗಿ ಬದುಕಲು ಹೇಗೆ ಸಹಕಾರಿಯಾಗಿದೆ ಎಂಬುದನ್ನು ತಿಳಿಸಿದರು.

ಮತ್ತೋರ್ವ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀಮತಿ ಶಾಂತಗಿರಿಯಣ್ಣ ಅವರು ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಸೇರುವಂತಹ ವಿದ್ಯಾರ್ಥಿಗಳು ಸ್ವ-ಇಚ್ಛೆಯಿಂದ ಸೇರಬೇಕು. ವಿದ್ಯಾರ್ಥಿಗಳಲ್ಲಿ ದೇಶ ಪ್ರೇಮ, ನಾಡು, ನುಡಿಯ ಬಗ್ಗೆ ಗೌರವ, ಸಮಾನತೆ ಮುಂತಾದ ಗುಣಗಳು ಮೈಗೂಡುವುದು ಎಂದರು.

ಈ ಸಮಾರಂಭದಲ್ಲಿ ವಿದ್ಯಾರ್ಥಿನಿಯರು ರೆಡ್ ಕ್ರಾಸ್ ಹಾಗೂ ಸ್ಕೌಟ್ ಮತ್ತು ಗೈಡ್ಸ್‌ನ ಬಗ್ಗೆ ಸಂಕ್ಷಿಪ್ತ ಮಾಹಿತಿ ನೀಡಿ ಅದಕ್ಕೆ ಸಂಬಂಧಿಸಿದ ಭಿತ್ತಿ ಚಿತ್ರಗಳನ್ನು ಪ್ರದರ್ಶಿಸಿದರು.

## ಕೋಲಾರ

ದಿನಾಂಕ 12-6-2013ರಂದು ಸರ್ಕಾರಿ ಪದವಿ ಪೂರ್ವ ಕಾಲೇಜು, ಸೋಮಯಾಜಲಹಳ್ಳಿ, ಶ್ರೀನಿವಾಸಪುರ ತಾಲ್ಲೂಕು, ಇಲ್ಲಿ "ವಿಶ್ವ ಬಾಲಕಾರ್ಮಿಕ ವಿರೋಧಿ ದಿನಾಚರಣೆ", ಸ್ಕೌಟ್‌ಗಳಿಗೆ "ರಾಜ್ಯ ಪುರಸ್ಕಾರ ಪ್ರಶಸ್ತಿ ವಿತರಣೆ" ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ, ರಾಜ್ಯ ಸಂಸ್ಥೆಯ ವತಿಯಿಂದ ಸ್ಕೌಟ್ಸ್ ಗೈಡ್‌ಗಳಿಗೆ "ಉಚಿತ ಸಮವಸ್ತ್ರ ವಿತರಣೆ" ಸಮಾರಂಭ ಏರ್ಪಡಿಸಲಾಗಿತ್ತು. ಮುಖ್ಯ ಅತಿಥಿಗಳಾಗಿ ಪದವಿ ಪೂರ್ವ ಕಾಲೇಜಿನ ನಿವೃತ್ತ ಪ್ರಾಂಶುಪಾಲರು ಹಾಗೂ ವಿಶೇಷಾಧಿಕಾರಿಗಳು, ಕಸ್ತೂರ್‌ಬಾ ಗಾಂಧಿ ಬಾಲಿಕಾ ವಸತಿ ನಿಲಯ, ಸೋಮಯಾಜಲಹಳ್ಳಿ ಇವರು ಆಗಮಿಸಿದ್ದರು.

ಸಾಮೂಹಿಕ ಪ್ರಾರ್ಥನೆಯ ನಂತರ ಕು॥ ಬಿ.ವಿ. ಚಿಕ್ಕರೆಡ್ಡೆಮ್ಮನವರು ಸ್ವಾಗತಿಸಿದರು. ಸ್ಕೌಟ್ ಮಾಸ್ಟರ್ ಶ್ರೀ ಸಿ.ಕೆ. ಗೋಪಾಲರಾವ್‌ರವರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಮೂಲತತ್ವಗಳನ್ನು ತಿಳಿಸಿ ಉಚಿತ ಸಮವಸ್ತ್ರಗಳ ಸದುಪಯೋಗಪಡಿಸಿಕೊಂಡು ಸಮಾಜದಲ್ಲಿ ಸತ್ಪ್ರಜೆಗಳಾಗಿ ಬಾಳಬೇಕೆಂದು ತಿಳಿಸಿದರು. ಮುಖ್ಯ ಅತಿಥಿಗಳು ವಿಶ್ವ ಬಾಲಕಾರ್ಮಿಕ ವಿರೋಧಿ ದಿನಾಚರಣೆಯ ಮಹತ್ವ, ವಿದ್ಯಾರ್ಥಿಗಳಾಗಿ, ಶಿಕ್ಷಕರಾಗಿ ನಾವು ಮಾಡಬಹುದಾದ ಕೆಲಸ ತಿಳಿಸಿಕೊಟ್ಟರು.

ಅಧ್ಯಕ್ಷರ ಭಾಷಣದಲ್ಲಿ ಉಪಪ್ರಾಂಶುಪಾಲರಾದ ಶ್ರೀಮತಿ ಕೆ.ಎನ್. ಗಾಯತ್ರಿಯವರು ಬಾಲಕಾರ್ಮಿಕತನವನ್ನು ವಿರೋಧಿಸಬೇಕೆಂದು ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಸಂಸ್ಥೆಯು ಒಂದು ಸ್ವಯಂ ಸೇವಾ ಸಂಸ್ಥೆಯಾಗಿದ್ದು ಅದರ ಪ್ರತಿಜ್ಞೆ ಮತ್ತು ನಿಯಮವನ್ನು ಎಲ್ಲರೂ

ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಅದರಂತೆ ಬಾಳಬೇಕೆಂದು ತಿಳಿಸಿದರು. ನಂತರ ಶಿಕ್ಷಕರಾದ ಶ್ರೀ ಅರುಣ್‌ಕುಮಾರ್ ವಂದಿಸಿದರು.

☆ ☆ ☆ ☆ ☆ ☆ ☆ ☆ ☆

ದಿನಾಂಕ 5-6-2013 ರಂದು ಸರ್ಕಾರಿ ಪದವಿಪೂರ್ವ ಕಾಲೇಜು ಸೋಮಯಾಜಲಹಳ್ಳಿಯಲ್ಲಿ ವಿಶ್ವ ಪರಿಸರ ದಿನಾಚರಣೆಯನ್ನು ಆಚರಿಸಲಾಯಿತು.

ಬೆಳಿಗ್ಗೆ 11-30ಕ್ಕೆ ಭಗತ್ ಸಿಂಗ್ ಸ್ಕೌಟ್ ದಳದ ವಿದ್ಯಾರ್ಥಿಗಳು ಹಾಗೂ ಶಾಲಾ ವಿದ್ಯಾರ್ಥಿಗಳೊಂದಿಗೆ ಸೋಮಯಾಜಲಹಳ್ಳಿ ಹಾಗೂ ಓಜಲಹಳ್ಳಿ ಗ್ರಾಮದಲ್ಲಿ ಜಾಥಾ ಹಮ್ಮಿಕೊಳ್ಳಲಾಗಿತ್ತು. ಸ್ಕೌಟ್ಸ್-ಗೈಡ್ ವಿದ್ಯಾರ್ಥಿಗಳು ಘೋಷಣೆಗಳನ್ನು ಕೂಗುತ್ತಾ ಜನರಲ್ಲಿ ಪರಿಸರ ಸಂರಕ್ಷಣೆಯ ಬಗ್ಗೆ ಜಾಗೃತಿ ಮೂಡಿಸಿದರು.

ನಂತರ ಶಾಲೆಯಲ್ಲಿ ಸರಳ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಈ ಸಮಾರಂಭದಲ್ಲಿ 4 ವಿದ್ಯಾರ್ಥಿಗಳು ವಿಶ್ವ ಪರಿಸರ ದಿನಾಚರಣೆಯ ಆಚರಣೆಯ ಮಹತ್ವವನ್ನು ವಿವರಿಸಿದರು. ನಂತರ ವಿಜ್ಞಾನ ಶಿಕ್ಷಕರು ಹಾಗೂ ಸ್ಕೌಟ್ಸ್ ಮಾಸ್ಟರ್ ಆದ ಸಿ.ಕೆ. ಗೋಪಾಲರಾವ್‌ರವರು ವಿಶ್ವ ಪರಿಸರ ದಿನಾಚರಣೆಯ ಇತಿಹಾಸ, ಆಚರಣೆಯ ಮಹತ್ವ, ಪ್ರತಿಯೊಬ್ಬರೂ ಮಾಡಬಹುದಾದ 5 ಕೆಲಸ ಹಾಗೂ ಈ ವರ್ಷದ ಧ್ಯೇಯವಾಕ್ಯದ ಬಗ್ಗೆ ವಿವರವಾಗಿ ತಿಳಿಸಿಕೊಟ್ಟರು.

ಮದ್ಯಾಹ್ನ 24 ವಿವಿಧ ಜಾತಿಯ ಉಪಯುಕ್ತ ಗಿಡಗಳನ್ನು ಶಾಲಾ ಆವರಣದಲ್ಲಿ ನೆಟ್ಟು ವಿದ್ಯಾರ್ಥಿಗಳಿಗೆ ಆ ಸಸ್ಯಗಳನ್ನು ಸಂರಕ್ಷಿಸಲು ತಿಳಿಸಲಾಯಿತು.

## ಹಾಸನ

ದಿನಾಂಕ 7-6-2013 ರಿಂದ 9-6-2013ರ ವರೆಗೆ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಗೆ "ತೃತೀಯ ಸೋಪಾನ ತರಬೇತಿ ಮತ್ತು ಪರೀಕ್ಷಾ ಶಿಬಿರ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ಹಾಸನ, ಇವರ ಆಶ್ರಯದಲ್ಲಿ ಜರುಗಿತು. ಈ ಶಿಬಿರದಲ್ಲಿ ವಿವಿಧ ತಾಲ್ಲೂಕುಗಳಿಂದ 130 ಸ್ಕೌಟ್ಸ್, 120 ಗೈಡ್ಸ್, 30 ಮಂದಿ ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು.

ಈ ಶಿಬಿರವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ವೈ.ಎಸ್. ವೀರಭದ್ರಪ್ಪನವರು ಉದ್ಘಾಟಿಸಿದರು. ಮಕ್ಕಳಿಗೆ ಶುಭ ಹಾರೈಸಿದರು. ಶಿಬಿರದ ಉದ್ಘಾಟನೆಯ ನಂತರ ಮಕ್ಕಳನ್ನು ಅಷ್ಟಕಗಳನ್ನಾಗಿ ವಿಂಗಡಿಸಿ, "ಬೇಸ್ ಪದ್ಧತಿ" ಮೂಲಕ ಮಕ್ಕಳಿಗೆ ತರಬೇತಿ ನೀಡಿ, ಪರೀಕ್ಷೆ ಏರ್ಪಡಿಸಲಾಯಿತು. ಪ್ರವೇಶದಿಂದ ತೃತೀಯ ಸೋಪಾನದವರೆಗೆ ಬರುವ ಎಲ್ಲ ವಿಷಯಗಳನ್ನು ಮಕ್ಕಳಿಗೆ ಮನದಟ್ಟು ಮಾಡಿ ಪರೀಕ್ಷಿಸಲಾಯಿತು. ಸ್ಕೌಟ್ ವಿಭಾಗಕ್ಕೆ ಶ್ರೀ ಕೆ. ಭರತ್ ಇವರು ನಾಯಕರಾಗಿ ಗೈಡ್ ವಿಭಾಗಕ್ಕೆ ಶ್ರೀಮತಿ ಕಾಮೇಶ್ವರಿ ಇವರು ನಾಯಕರಾಗಿ ಕರ್ತವ್ಯ ನಿರ್ವಹಿಸಿದರು.

ದಿನಾಂಕ 9 ರಂದು ಬೆಳಿಗ್ಗೆ 7–30ಕ್ಕೆ ಸರಿಯಾಗಿ "ಸರ್ವಧರ್ಮ ಪ್ರಾರ್ಥನೆ" ಜರುಗಿತು. ಈ ಸಭೆಯಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿಯವರು ಉಪಸ್ಥಿತರಿದ್ದು ಮಕ್ಕಳಿಗೆ ಪ್ರಾರ್ಥನೆಯ ಮಹತ್ವವನ್ನು ಮನದಟ್ಟು ಮಾಡಿಕೊಟ್ಟರು.

ದಿನಾಂಕ 9 ರಂದು ಮದ್ಯಾಹ್ನ 3 ಗಂಟೆಗೆ ಸಮಾರೋಪ ಸಮಾರಂಭ ನೆರವೇರಿತು. ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ವೈ.ಸ್. ವೀರಭದ್ರಪ್ಪನವರು ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿ ಇವರು ಸರ್ವರನ್ನು ಸ್ವಾಗತಿಸಿದರು. ಶ್ರೀ ಶ್ರೀ ಶ್ರೀ ತ್ಯಾಗೀಶ್ವರಾನಂದ ಮಹಾರಾಜ್‌ಜೀ, ರಾಮಕೃಷ್ಣಾಶ್ರಮ, ಬೆಂಗಳೂರು ಇವರು ದಿವ್ಯ ಸಾನಿಧ್ಯ ವಹಿಸಿ **"ಏಳಿ, ಎದ್ದೇಳಿ, ಗುರಿ ಮುಟ್ಟುವ ವರೆಗೆ ನಿಲ್ಲದಿರಿ"** ಎಂಬ ದಿವ್ಯ ಸಂದೇಶವನ್ನು ಸಾರಿ ಮಕ್ಕಳನ್ನು ಏಕಾಗ್ರಚಿತ್ತರನ್ನಾಗಿಸಿದರು. ವಿವೇಕಾನಂದರ ತತ್ವಾದರ್ಶಗಳನ್ನು ಮಕ್ಕಳಿಗೆ ಬಿತ್ತರಿಸಿದರು. ಇವರೊಂದಿಗೆ ಶ್ರೀ ಶ್ರೀ ಶ್ರೀ ಮಹಾವಾದ್ಯಾನಂದಾಜೀ ಸ್ವಾಮೀಜಿ ಉಪಸ್ಥಿತರಿದ್ದರು. ಶ್ರೀ ಎಲ್.ಟಿ. ಲೋಕೇಶ್ ಇವರು ಶಿಬಿರದ ಸಂಕ್ಷಿಪ್ತ ಪರಿಚಯ ಮಾಡಿಕೊಟ್ಟರು. ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಶೈಲಾ ಅಭಿನಂದನ್ ಇವರು ಮಕ್ಕಳಿಗೆ ತೃತಿಯ ಸೋಪಾನ ತರಬೇತಿಯ ಪ್ರಮಾಣ ಪತ್ರವನ್ನು ವಿತರಿಸಿದರು. ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಮುತ್ತೇಗೌಡರು, ಜಂಟಿ ಕಾರ್ಯದರ್ಶಿ (ಗೈಡ್ಸ್) ಶ್ರೀಮತಿ ಜಯಾ ರಮೇಶ್ ಉಪಸ್ಥಿತರಿದ್ದರು. ಶ್ರೀ ಎಂ.ಎಸ್. ಪ್ರಕಾಶ್ ವಂದಿಸಿದರು. ಶ್ರೀ ಕೆ. ಭರತ್ ಕಾರ್ಯಕ್ರಮ ನಿರೂಪಿಸಿದರು.

## Bangalore South

The HAL Rover Crew conducted summer camp for Children from 22nd April to 2nd May 2013 at HAL Scout Den.

This camp was organized to create Scouting Awareness among the Children of HAL Employees and Officers, exclusively on Scouting skills / Activities. Nearly 65 Children participated in the camp.

The Following activities were conducted.

1. Good "Turn Out and" Uniform.
2. Physical jerks and Drill.
3. Tent Pitching and Striking.
4. Wood craft sign and backwoods man cooking.
5. Compass, Mapping and Estimation.
6. Knots and Lashing

7. Environment and Waste Management.

8. Visit to HAL Heritage Centre

9. Fire Fighting and Safety

10. Visit to State Training Centre (Dr. Annie Besant Scout and Guides Camping and Training Centre)

Layman from Defence Secutiry Corps, Environmentalist, Yoga, Personality Development, Martial Arts, have also dealt with Fire personel were called to conduct classes. Sri Chakaravathi took a session on Compass and Mapping.

Sri M.R. Udaya Kumar, GM (FMD) Inaugurated the Summer Camp. The participants were provided with Scarf, Caps, Writing material, Snacks and Food.

Sri D.K. Venkatesh, GM (F&F) was the Chief Guest for the Valedictory function. Certificates were distributed to all the participants.

Smt. Sujatha, Guide Captain, Bangalore North, Sri Chakravathi, Ex-District Secretary, Sri Narayanaswamy, District Training Commissioner, Bangalore South. Visited the Camp.



The Bharat Scouts and Guides, Bangalore South District Conducted a One Day Unit Leaders Workshop at State Headquarters on 8th June 2013.

110 Unit Leaders attended the Workshop. Mr. T.K. Narayanswamy, LT(S) & DTC(S) was the Leader of the Workshop. Mrs. Uma Nagesh, DC(G), Mr. Siddagangaiaiah Badge Secretary (S) and Mrs. Dakshayani, Badge Secretary (G) were also Present. Sessions of Effective Troop Annual Plan and other Unit related topics were discussed at large. Mr. M.S. Satheesh, District Secretary and Mr. A.S. Madhusudan Coordinated the Event.



The Bharat Scouts and Guides, Banglaore South District Participated in the Blood Donation Awarness Walk on 14th June 2013. 61 Scouts and Guides from Oxford School particpated in the Walk.

## ಬೆಂಗಳೂರು ಉತ್ತರ

ದಿನಾಂಕ 18-6-2013 ರಂದು ಬೆಂಗಳೂರು ಉತ್ತರ ಜಿಲ್ಲೆಯ ವೈಯಾಲಿಕಾವಲ್, ಚೌಡಯ್ಯ ಮೆಮೋರಿಯಲ್ ಹಾಲ್‌ನಲ್ಲಿ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ವತಿಯಿಂದ **"ವಿಶ್ವ ಪರಿಸರ ದಿನಾಚರಣೆ"**ಯನ್ನು ಆಚರಿಸಲಾಯಿತು. ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಅರಣ್ಯ ಹಾಗೂ ಪರಿಸರ ಜೀವಶಾಸ್ತ್ರದ ಸಚಿವರಾದ ಮಾನ್ಯ ಶ್ರೀ ರಮಾನಾಥ್ ರೈರವರು ಭಾಗವಹಿಸಿದ್ದರು.

ಕಾರ್ಯಕ್ರಮದಲ್ಲಿ ಬೆಂಗಳೂರು ಉತ್ತರ ಜಿಲ್ಲೆಯ ಪೂರ್ಣಪ್ರಜ್ಞ ಶಾಲೆ, ಸದಾಶಿವನಗರ, ಸ್ಟೆಲ್ಲಾಮೇರಿಸ್ ಶಾಲೆ, ವೈಯಾಲಿಕಾವಲ್, ಹಿಮಾಂಶು ಶಾಲೆ, ಮಲ್ಲೇಶ್ವರಂ, ಸನ್ಮತಿ ಓಪನ್ ಟ್ರೂಪ್ ಹಾಗೂ ಚಾಮುಂಡಿ ಸ್ಕೌಟ್ ಗ್ರೂಪ್ ವತಿಯಿಂದ ಸುಮಾರು 110 ಸ್ಕೌಟ್ಸ್-ಗೈಡ್ಸ್‌ಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಶ್ರೀ ಎ.ಎಂ. ಶಂಕರ್, ಎ.ಎಸ್.ಓ.ಸಿ(ಎಸ್)ರವರು ಕಾರ್ಯಕ್ರಮದ ಸಂಘಟಕರಾಗಿದ್ದರು.

## ಕೊಪ್ಪಳ

ದಿನಾಂಕ 15-6-2013 ರಂದು ಸರಕಾರಿ ಪ್ರೌಢಶಾಲೆ ಕೊಪ್ಪಳದಲ್ಲಿ ವಿಶ್ವ ಪರಿಸರ ದಿನಾಚರಣೆಯನ್ನು ಆಚರಿಸಲಾಯಿತು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಶಾಲೆಯ ಮುಖ್ಯೋಪಾಧ್ಯಾಯರು ಮಾತನಾಡುತ್ತಾ ಈ ದಿನಾಚರಣೆಯಲ್ಲಿ ಮಹತ್ವವಿದೆ. ನಾವು ನಮ್ಮ ವಾಸಿಸುವ ಪ್ರದೇಶಗಳಲ್ಲಿ ಗಿಡಗಳನ್ನು ಕಾಪಾಡುವುದು ಮತ್ತು ಸಸಿಗಳನ್ನು ನೆಡುವುದರಿಂದ ಗಾಳಿ ಹಾಗು ಪರಿಸರಕ್ಕೆ ಅನುಕೂಲವಾಗುತ್ತದೆ ಎಂದು ತಿಳಿಸಿದರು.

ಈ ಕಾರ್ಯಕ್ರಮದಲ್ಲಿ ಸರಕಾರಿ ಪ್ರೌಢಶಾಲೆಯ ಸ್ಕೌಟ್ಸ್-ಗೈಡ್ಸ್ ಮಕ್ಕಳು ಹಾಗು ಶ್ರೀ ಜಯರಾಜ ಬೂಸದ ಸಹಾಯಕ ಜಿಲ್ಲಾ ಕಾರ್ಯದರ್ಶಿಗಳು ಹಾಗು ಶ್ರೀ ಎ.ಎಸ್. ಶಿವಕುಮಾರ್, ಎ.ಎಸ್.ಓ..ಸಿ(ಎಸ್) ಭಾಗವಹಿಸಿದ್ದರು.

## ಬಾಗಲಕೋಟೆ

ದಿನಾಂಕ 5-6-2013 ರಂದು ವಿಶ್ವ ಪರಿಸರ ದಿನಾಚರಣೆಯನ್ನು ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಕೇಂದ್ರ ಕಛೇರಿ ಆವರಣದಲ್ಲಿ ಆಚರಿಸಲಾಯಿತು. ಬೆಳಿಗ್ಗೆ 10-00 ಗಂಟೆಗೆ ಸ್ಥಳಿಯ ಶಾಲೆಗಳಿಂದ ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳು, ಪರಿಸರ ದಿನಾಚರಣೆಯಲ್ಲಿ ಬಂದು ಪಾಲ್ಗೊಂಡಿದ್ದರು. ಕಾರ್ಯಕ್ರಮದಲ್ಲಿ ಪಾಲ್ಗೊಂಡಿರುವ ಸರ್ವರನ್ನು ಶ್ರೀ ನಾರಾಯಣ ಯಳ್ಳಿಗುತ್ತಿರವರು ಸ್ವಾಗತಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಚಂದ್ರಶೇಖರ ಅ. ಸಾವಳಗಿರವರು ವಿದ್ಯಾರ್ಥಿಗಳಿಗೆ ವಿಶ್ವ ಪರಿಸರ ಹಾಗೂ ಶಾಲಾ ಆವರಣದಲ್ಲಿ ಸಸಿಗಳನ್ನು ನೆಡಲು ಮಾರ್ಗದರ್ಶ ನೀಡಿದರು. ಸಭೆಯಲ್ಲಿದ್ದ ಎಲ್ಲಾ ಪದಾಧಿಕಾರಿಗಳು ವಿಶ್ವ ಪರಿಸರ ಕುರಿತು ಸಂಕ್ಷಿಪ್ತವಾಗಿ ಮಾತನಾಡಿದರು. ನಂತರ ವಿದ್ಯಾರ್ಥಿಗಳಿಂದ ಜಿಲ್ಲಾ ಕಛೇರಿ ಆವರಣದಲ್ಲಿ "ಸಸಿ"ಗಳನ್ನು ನೆಡಸಲಾಯಿತು. ಕೊನೆಯಲ್ಲಿ ವಂದನಾರ್ಪಣೆಯನ್ನು ಜಿಲ್ಲಾ ಸಂಘಟಕ ಶ್ರೀ ಶರೀಫ್ ಹತ್ತಿಮತ್ತೂರ ಸಲ್ಲಿಸಿದರು.

*.......ಹಿಂದಿನ ಸಂಚಿಕೆಯಿಂದ*

ಅಧ್ಯಾಯ-3 ಕಾರ್ಯಸರಣಿ ಶಿಬಿರಾಗ್ನಿ ಉದಂತ ಸಂ-9

# ಶಿಬಿರ ಕೌಶಲ್ಯ
# (CAMP CRAFT)

**ಶಿಬಿರದಲ್ಲಿ ಸೌಖ್ಯ-ಆವರಣ-ಶಿಬಿರ ಸರಂಜಾಮು-ಬೀಡುಬಿಡುವುದು ಬೆಂಕಿಯನ್ನು ಅಣಿಮಾಡುವುದು-ಶಿಬಿರವನ್ನು ಚೊಕ್ಕಟವಾಗಿಡುವುದು**

## ನೀರು ಸರಬರಾಜು

ಆವರಣದಲ್ಲಿ ಸಮೀಪದಲ್ಲಿ ನೀರಿನ ಊಟೆಯೋ ಅಥವಾ ಸಣ್ಣ ಹೊಳೆಯೋ ಇದ್ದರೆ ಈ ಪ್ರದೇಶವನ್ನು ಚೊಕ್ಕಟವಾಗಿಟ್ಟುಕೊಂಡು ಕುಡಿಯುವ ನೀರಿಗೆ ಅದನ್ನು ಉಪಯೋಗಿಸಬಹುದು. ಹೊಳೆಯ ಇಳಿತದ ಕಡೆ ಸ್ವಲ್ಪ ದೂರಕ್ಕೆ ಸ್ನಾನ ಮತ್ತು ಬಟ್ಟೆಗಳಿಗಾಗಿ ಬೇರೆ ಬೇರೆ ಸ್ಥಳಗಳನ್ನು ನಿಗದಿಪಡಿಸಬಹುದು.

ಕುಡಿಯುವ ನೀರು ಚೊಕ್ಕಟವಾಗಿರುವ ಬಗ್ಗೆ, ಸ್ಕೌಟುಗಳು ಹೆಚ್ಚು ಗಮನ ಹರಿಸುತ್ತಾರೆ. ಇಲ್ಲದಿದ್ದರೆ ಶಿಬಿರದಲ್ಲಿ ಅವರಿಗೆ ಖಾಯಿಲೆ ಬರುತ್ತದೆ. ನೀರನ್ನು ಸದಾಕಾಲ ದಪ್ಪ ಬಟ್ಟೆಯಲ್ಲಿ ಸೋಸುವುದು ಒಳ್ಳೆಯದು.

ಎಲ್ಲಾ ನೀರಿನಲ್ಲಿಯೂ ಅನೇಕ ಕ್ರಿಮಿಗಳಿರುತ್ತವೆ. ಅವುಗಳೆಲ್ಲವನ್ನೂ ಸೂಕ್ಷ್ಮದರ್ಶಕ ಯಂತ್ರದ ಮೂಲಕ ನೋಡಬಹುದೇ ಹೊರತು ಬರಿಯ ಕಣ್ಣಿಗೆ ಕಾಣಿಸುವುದಿಲ್ಲ. ಅವುಗಳಲ್ಲಿ ಕೆಲವು ಅಪಾಯಕಾರಿಯಲ್ಲದಿದ್ದರೂ ಕೆಲವು ಬಹಳ ಅಪಾಯಕಾರಿ. ನೀರನ್ನು ನೋಡಿ ಅಪಾಯಕಾರಿ ಸೂಕ್ಷ್ಮಕ್ರಿಮಿಗಳ ಬಗ್ಗೆ ನೀವು ಹೇಳಲಾರಿರಿ. ಆದ್ದರಿಂದ, ಅನುಮಾನದಿಂದ ಅವಸ್ಥೆ ಪಡುವುದರ ಬದಲು, ನೀರನ್ನು ಕುದಿಸಿ, ಅಪಾಯಕಾರಿ ಕ್ರಿಮಿಗಳನ್ನು ಕೊಲ್ಲುವುದು ಕ್ಷೇಮಕರ. ಕಾಯಿಸಿದ ನೀರನ್ನು ಆರಿಸಿ ಕುಡಿಯುವುದು ಆರೋಗ್ಯಕರವಾದುದು. ಕುದಿಸುವಾಗ ನೀರು ಸುಮ್ಮನೆ ಕುದಿತಕ್ಕೆ ಬಂದರೆ ಸಾಲದು. 15 ನಿಮಿಷ ಕಾಲ ಕುದಿಸುವುದೊಳ್ಳೆಯದು. ಅನೇಕ ಕ್ರಿಮಿಗಳು ಸುಲಭವಾಗಿ ಸಾಯುವುದಿಲ್ಲ. ಅವು ಸಾಯಬೇಕಾದರೆ ನೀರು ಚೆನ್ನಾಗಿ ಕುದಿಯಬೇಕು.

## ಅಡಿಗೆ ಮನೆ

ಅಡಿಗೆ ಒಲೆಯ ಉರಿಯು, ಗಾಳಿ ಮರೆಯ ದಿಕ್ಕು ಅಥವಾ ಶಿಬಿರದಲ್ಲಿ ಗಾಳಿಯ ವಿರುದ್ಧ ದಿಕ್ಕಿನ ಕಡೆಗಿರಬೇಕು. ಇದರಿಂದ ಹೊಗೆ ಮತ್ತು ಬೆಂಕಿಯ ಕಿಡಿಗಳು ಗುಡಾರದೊಳಗೆ ಬರುವುದಿಲ್ಲ. ವಿವಿಧ ರೀತಿಯ ಅಡಿಗೆ ಒಲೆಗಳ ಬಗ್ಗೆ ಉದಂತ 10ರಲ್ಲಿ ವಿವರಿಸಲಾಗಿದೆ.

ನುರಿತ ಸ್ಕೌಟುಗಳು ವಿಶೇಷ ಆಸ್ಥೆ ವಹಿಸಿ ಅಡಿಗೆ ಮಾಡುವ ಪ್ರದೇಶವನ್ನು ವಿಶೇಷವಾಗಿ ಚೊಕ್ಕಟವಾಗಿಟ್ಟಿರುತ್ತಾರೆ. ಏಕೆಂದರೆ ಅಲ್ಲಲ್ಲಿ ಬಿದ್ದು ಕೊಳೆಯುವ ಆಹಾರದ ಉಳಿಕೆ, ಪಳಿಕೆಗಳು ಒಳ್ಳೆಯ ಆಹಾರವನ್ನೂ ವಿಷಪೂರಿತವನ್ನಾಗಿ ಮಾಡುವ ಸಾಧ್ಯತೆಯಿದೆ. ಅದರಿಂದ ಸ್ಕೌಟುಗಳಿಗೆ ರೋಗ ತಗುಲುವ ಸಂಭವವೂ ಉಂಟು.

ಆದ್ದರಿಂದ ಶಿಬಿರದ ಅಡಿಗೆ ಮನೆಯನ್ನೂ ಮತ್ತು ಅದರ ಅಸುಪಾಸುಗಳನ್ನು ಸದಾಕಾಲ ಚೊಕ್ಕಟವಾಗಿಡಿ.

ಇದಕ್ಕಾಗಿ ನಿಮಗೆ ಒಂದು ಒಣಗುಂಡಿಯೂ, ಒಂದು ತೇವದ ಗುಂಡಿಯೂ ಬೇಕಾಗುತ್ತದೆ. ಈ ಗುಂಡಿಗಳು ಸುಮಾರು 45 ಸೆಂ.ಮೀ. ಚೌಕವಿದ್ದು, ಕನಿಷ್ಠ 60 ಸೆಂ.ಮೀ. ಆಳವಿರುತ್ತದೆ. ತೇವ ಗುಂಡಿಯ ಮೇಲು ಭಾಗವನ್ನು ಒಣಹುಲ್ಲು ಅಥವಾ ಹಸಿ ಹುಲ್ಲಿನಿಂದ ಮುಚ್ಚಬೇಕು. ಜಿಡ್ಡು ಜಿಡ್ಡಾದ ಪಾತ್ರೆ ಇತ್ಯಾದಿ, ತೊಳೆದ ನೀರನ್ನು ಅದರ ಮೇಲೆ ಸುರಿದರೆ, ಜಿಡ್ಡೂ ಕೊಳೆಯೂ ಹುಲ್ಲಿನಲ್ಲಿ ನಿಂತು, ಬರಿಯ ನೀರು ಗುಂಡಿಯನ್ನು ಸೇರುತ್ತದೆ. ಇದರಿಂದ ಗುಂಡಿಯು ಕಟ್ಟಿಕೊಂಡು ನೀರು ಬಸಿಯದೆ ಇರುವುದು ತಪ್ಪುತ್ತದೆ. ಪ್ರತಿದಿನವೂ ಕಸ ಕಡ್ಡಿ ಸೇರಿದ ಹುಲ್ಲನ್ನು ತೆಗೆದು ಸುಟ್ಟು ಹಾಕಬೇಕು ಮತ್ತು ಹೊಸ ಹುಲ್ಲನ್ನು ಹಾಕಬೇಕು.

ಒಣಗುಂಡಿಯೊಳಕ್ಕೆ ಸುಡಲಾಗದಂತಹ ಎಲ್ಲಾ ವಸ್ತುಗಳನ್ನು ಹಾಕಬೇಕು. ಆಹಾರ ಪದಾರ್ಥಗಳ ಟಿನ್‌ಗಳನ್ನು ಮೊದಲು ಸುಡಬೇಕು. ಆ ಬಳಿಕವೇ ಅದನ್ನು ಜಜ್ಜಿ ಹಾಕಿ, ಒಣಗುಂಡಿಯೊಳಕ್ಕೆ ಹಾಕಬೇಕು. ಸಾಧ್ಯವಾದುದೆಲ್ಲವನ್ನೂ ಸುಟ್ಟು ಬಿಡಿ. ಇಲ್ಲದಿದ್ದರೆ ಗುಂಡಿಯು ಬಹಳ ಬೇಗ ತುಂಬಿಬಿಡುತ್ತದೆ. ಪ್ರತಿದಿನವೂ ಸಂಜೆಯ ವೇಳೆಯಲ್ಲಿ ತುಂಬಿದ ಕಸದ ಮೇಲೆ ಒಂದು ಪದರ ಮಣ್ಣನ್ನು ಹಾಕಿ ಮುಚ್ಚಬೇಕು.

## ಶೌಚಾಲಯಗಳು

ಇನ್ನೊಂದು ಮುಖ್ಯ ಅಂಶವೆಂದರೆ, ಶಿಬಿರದಲ್ಲಿ ಸ್ಕೌಟ್‌ನ ಆರೋಗ್ಯವನ್ನು ಕಾಪಾಡ ಬೇಕಾದರೆ, ಶೌಚಾಲಯದ ಬಗ್ಗೆ ಮೊದಲು ಗಮನಹರಿಸಬೇಕು. ಒಂದು ಕಾಲುವೆಯನ್ನು ತೋಡಿ, ಅದನ್ನು ಶೌಚಾಲಯವನ್ನಾಗಿ ಉಪಯೋಗಿಸಬೇಕು. ಪ್ರತಿ ಸ್ಕೌಟೂ ಈ ಅಂಶವನ್ನು ನೆನಪಿನಲ್ಲಿಡಬೇಕು.

ಗುಡಾರಗಳನ್ನು ಹಾಕುವುದಕ್ಕೆ ಮೊದಲು ಮತ್ತು ಬೆಂಕಿಯನ್ನು ಹೊತ್ತಿಸುವ ಮುಂಚೆ ಶೌಚಾಲಯಕ್ಕಾಗಿ ಕಾಲುವೆಗಳನ್ನು ತೋಡಬೇಕು. ಅವುಗಳ ಸುತ್ತಲೂ ತೆರೆಯನ್ನು ಹಾಕಬೇಕು. ಕಾಲುವೆಯು 90 ಸೆಂ.ಮೀ. ಅಗಲ ಮತ್ತು 90 ಸೆಂ.ಮೀ. ಆಳವಿರಬೇಕು. ಉಪಯೋಗಿಸುವವರು ಕಾಲುವೆಯ ಎರಡೂ ಕಡೆ ಕಾಲುಗಳನ್ನಿಟ್ಟುಕೊಂಡು ಕೂಡಲು ಅನುಕೂಲವಾಗಿರುತ್ತದೆ. ಪ್ರತಿ ಬಾರಿಯೂ ಉಪಯೋಗಿಸಿದ ಕೂಡಲೇ, ಅದರ ಮೇಲೆ ಒಂದು ಪದರ ಮಣ್ಣನ್ನು ಮುಚ್ಚಬೇಕು. ಕೆಲವು ದಿನಗಳ ಉಪಯೋಗದ ಬಳಿಕ ಪೂರಾ ಗುಂಡಿಯನ್ನು ಮುಚ್ಚಿಬಿಡಬೇಕು.

ಒಂದು ತೇವ ಶೌಚಾಲಯ ಸಹ ಇರಬೇಕು. ಇದಕ್ಕೆ 30 ಸೆಂ.ಮೀ. ಸುತ್ತಿನ ಆಳವಾದ ಗುಂಡಿಯನ್ನು ತೋಡಿ, ಅದರ ಅರ್ಧ ಆಳವನ್ನು ಜಲ್ಲಿಕಲ್ಲಿನಿಂದ ಮುಚ್ಚಬೇಕು. ಇದು ನೀರು ಭಾಗವನ್ನು ಬಸಿಯಲು ಅನುಕೂಲವಾಗುತ್ತದೆ.

ಒಂದು ರಾತ್ರಿಯ ಶಿಬಿರದಲ್ಲಿಯೂ ಸಹ, ಸ್ಕೌಟುಗಳು ಕಕ್ಕಸ್ಸಿಗಾಗಿ, ಕಾಲುವೆ ತೋಡುವುದನ್ನು ಮರೆಯಬಾರದು. ಶಿಬಿರವನ್ನು ಬಿಟ್ಟು ವಾಪಸ್ ಹೊರಡುವ ಸಮಯದಲ್ಲಿಯೂ ಸಹ ಕೆಲವು ಸೆಂ.ಮೀ.ಗಳ ಗುಣಿಯನ್ನು ತೋಡಿ, ಉಪಯೋಗವಾದ ಕೂಡಲೇ ಮಣ್ಣು ಹಾಕಿ ಮುಚ್ಚಿ ಬಿಡಬೇಕು. ಈ ಅಂಶವನ್ನು ಕಡೆಗಣಿಸಿದರೆ, ಆ ಜಾಗವು ಅನಾರೋಗ್ಯಕರವಾಗುತ್ತದೆ. ಆ ಸ್ಥಳದ ರೈತರು ಅಥವಾ ಜಮೀನ್‌ದಾರರು, ಮುಂದೆ ಸ್ಕೌಟುಗಳಿಗೆ ಶಿಬಿರ ಹೂಡಲು, ಅನುಮತಿಸಲು ನಿರಾಕರಿಸಬಹುದು. ಆದ್ದರಿಂದ ಸ್ಕೌಟುಗಳೇ ಆ ಅಂಶವನ್ನು ಮರೆಯಬೇಡಿ.

## ಶಿಬಿರದ ದಿನಚರಿ

ಈ ಕೆಳಗೆ ಎರಡು ರೀತಿಯ ದಿನದ ವೇಳಾಪಟ್ಟಿಯನ್ನು ಸೂಚಿಸಲಾಗಿದೆ. (ಆಯಾ ಪ್ರಾದೇಶಿಕ ಅವಶ್ಯಕತೆಗಳಿಗೆ ತಕ್ಕಂತೆ, ಸೂಕ್ತವಾದ ಬದಲಾವಣೆಗಳನ್ನು ಮಾಡಿಕೊಳ್ಳಬಹುದು.)

| ದಿನಚರಿ–1 | |
|---|---|
| ಬೆಳಿಗ್ಗೆ. 7.00 ಗಂ | ಏಳುವುದು, ಹಾಸಿಗೆ ಸರಿಪಡಿಸುವುದು ಮುಖ ತೊಳೆಯುವುದು ಇತ್ಯಾದಿ., |
| ಬೆಳಿಗ್ಗೆ. 8.00 ಗಂ. | ಪ್ರಾರ್ಥನೆ, ಧ್ವಜಹಾರಿಸುವುದು, (ಬೆಳಗಿನ ಪರಿಶೀಲನೆ ಆದ ಕೂಡಲೇ ಇದನ್ನಿಟ್ಟು ಕೊಳ್ಳುವುದು ಸೂಕ್ತವೆಂದು ತೋರುತ್ತದೆ) |
| ಬೆಳಿಗ್ಗೆ 8.15 ಗಂ | ಬೆಳಗಿನ ಉಪಹಾರ |
| ಬೆಳಿಗ್ಗೆ 9.45 ಗಂ | ಪರಿಶೀಲನೆ |
| ಬೆಳಿಗ್ಗೆ 10.00 ಗಂ ಯಿಂದ 12 ಗಂ. ವರೆಗೆ | ಸ್ಕೌಟ್ ಅಭ್ಯಾಸಗಳು – ಈಜುವುದು |
| ಮ. 1.00 ಗಂ | ಮಧ್ಯಾಹ್ನದ ಊಟ |
| ಮ. 1.30 ರಿಂದ 2.30ರ ವರೆಗೆ | ವಿಶ್ರಾಂತಿ (ಕಡ್ಡಾಯವಾದುದು) |
| ಮ. 2.30 ರಿಂದ 5.30ರವಗೆಗೆ | ನೆರೆಹೊರೆಯಲ್ಲಿ ಸ್ಕೌಟ್ ಆಟಗಳು ಈಜುವುದು |
| ಸಂ. 6–30ಕ್ಕೆ | ರಾತ್ರಿ – ಊಟ ವಿರಾಮಕಾಲ |
| ರಾತ್ರಿ 8.30ಕ್ಕೆ 9.30ರವರೆಗೆ | ಶಿಬಿರಾಗ್ನಿ |
| ರಾತ್ರಿ 9.00 ರಿಂದ 11.00ರವರೆಗೆ ಅಥವಾ ರಾತ್ರಿ 10.00 ರಿಂದ 11.00ರ ವರೆಗೆ | ರಾತ್ರಿಯ ಸ್ಕೌಟ್ ಅಭ್ಯಾಸಗಳು |
| ದೀಪ ಆರಿಸುವುದು ರಾತ್ರಿ 11.00ಕ್ಕೆ | ಶಿಬಿರದಲ್ಲಿ ಸಂಪೂರ್ಣ ನಿಶ್ಯಬ್ದತೆ |

| ದಿನಚರಿ–2 | |
|---|---|
| ಬೆಳಿಗ್ಗೆ. 7.00 ಗಂ | ಏಳುವುದು, ಹಾಸಿಗೆ ಸರಿಪಡಿಸುವುದು, ಮುಖ ತೊಳೆಯುವುದು ಇತ್ಯಾದಿ., |
| ಬೆಳಿಗ್ಗೆ. 8.00 ಗಂ. | ಪ್ರಾರ್ಥನೆ, ಧ್ವಜಹಾರಿಸುವುದು |
| ಬೆಳಿಗ್ಗೆ 8.15 ಗಂ | ಬೆಳಗಿನ ಉಪಹಾರ |
| ಬೆಳಿಗ್ಗೆ 10.00 ಗಂ | ಪರಿಶೀಲನೆ |
| ಬೆಳಿಗ್ಗೆ 10.15 ರಿಂದ 12.00 ಗಂ.ವರೆಗೆ | ಸ್ಕೌಟ್ ಅಭ್ಯಾಸಗಳು |
| ಮ. 1.00 ಗಂ | ಮಧ್ಯಾಹ್ನದ ಊಟ |
| ಮ 1.30 ರಿಂದ 2.30ರವರೆಗೆ | ನಿಶ್ಯಬ್ದತೆ, ವಿಶ್ರಾಂತಿ |
| ಮ. 2.30 ರಿಂದ 5.00 ಗಂ.ವರೆಗೆ | ಬಯಲಿನ ಆಟಗಳು |
| ಸಂ. 5.00 ಗಂ. | ಟೀ ಮತ್ತು ಬಿಸ್ಕತ್ತುಗಳು |
| ಸಂ. 5.30 ರಿಂದ ರಾತ್ರಿ 8.00ರವರೆಗೆ | ವಿನೋದಾವಳಿ ಮತ್ತು ಶಿಬಿರದ ಆಟಗಳು |
| ರಾತ್ರಿ 8.00 ಗಂ | ಕೋಕೋ ಕುಡಿಯುವುದು |
| ರಾತ್ರಿ 8.00 ಗಂ. 9.30ವರೆಗೆ | ಶಿಬಿರಾಗ್ನಿ |
| ರಾತ್ರಿ 10.00 ಗಂ. | ದೀಪ ಆರಿಸುವುದು |

## ಸ್ನಾನ ಮಾಡುವುದು ಮತ್ತು ಈಜುವುದು

ಶಿಬಿರದಲ್ಲಿರುವಾಗ ಸ್ನಾನ ಮಾಡುವುದೊಂದು ವಿನೋದ ಕಾರ್ಯ ಹಾಗೂ ಕರ್ತವ್ಯ ಕೂಡಾ. ವಿನೋದಕರ ಏಕೆಂದರೆ ನಮಗೆ ಹಿತಕರವಾಗಿರುತ್ತದೆ. ಕರ್ತವ್ಯ ಏಕೆಂದರೆ, ಯಾವ ಸ್ಕೌಟೂ ಸಹ, ಈಜು ಕಲಿತು ಪ್ರಾಣ ರಕ್ಷಣೆ ಮಾಡುವವರೆಗೆ ಸಂಪೂರ್ಣ ಸ್ಕೌಟ್ ಅಲ್ಲ. ಸ್ನಾನ ಮಾಡುವುದರಲ್ಲಿ, ಹಲವೊಂದು ಅಪಾಯಗಳಿವೆ. ಆದರೆ ಸ್ಕೌಟುಗಳು ಅವುಗಳನ್ನೆದುರಿಸಲು ತಯಾರಾಗಿರಬೇಕು.

ಮೊದಲನೆಯ ಅಪಾಯವೆಂದರೆ ಸೆಡೆತ ಬರುವುದು. ಊಟವಾದ ಒಂದೂವರೆ ಗಂಟೆಯೊಳಗೆ, ನದಿ ಅಥವಾ ಕೊಳದಲ್ಲಿ ಸ್ನಾನ ಮಾಡಲು ಇಳಿದರೆ, ಸಾಮಾನ್ಯವಾಗಿ ಕೈ-ಕಾಲುಗಳ ಸೆಡೆತವು ಬರುತ್ತದೆ. ಸೆಡೆತವು ಬಂದಾಗ ವಿಪರೀತ ನೋವುಂಟಾಗಿ, ಕೈ-ಕಾಲುಗಳನ್ನಾಡಿಸಲು ಆಗುವುದಿಲ್ಲ. ಇದರಿಂದ ನೀವು ನೀರಿನಲ್ಲಿ ಮುಳುಗುವಿರಿ. ಆ ತಪ್ಪು ಯಾರದು? ನಿಮ್ಮದೇ?

ಹೀಗೆ ಸ್ನಾನಕ್ಕೆ ಇಳಿದಾಗ ಇಬ್ಬರು ನುರಿತ ಈಜುಗಾರರು ಕಾವಲಿರಬೇಕು. ಅವರು, ತಾವೂ ಸ್ನಾನಕ್ಕಿಳಿಯದೆ, ದಡದಲ್ಲಿಯೇ ಬಟ್ಟೆಗಳನ್ನು ಕಳಚಿ, ನೀರಿಗೆ, ಯಾವ ಘಳಿಗೆಯಲ್ಲಾದರೂ ಸರಿ, ಧುಮುಕಲು ಸನ್ನದ್ಧರಾಗಿರಬೇಕು. ಅವಶ್ಯಕತೆ ಬಿದ್ದರೆ, ಕೂಡಲೇ ನೀರಿಗೆ ಧುಮುಕಿ, ಕಷ್ಟದಲ್ಲಿರುವ ಸ್ನಾನ ಮಾಡುವವರನ್ನು ರಕ್ಷಿಸಲು ಸಿದ್ಧರಾಗಿರಬೇಕು. ಸ್ನಾನ ಮಾಡುವವರೆಲ್ಲರೂ ನೀರಿನಿಂದ ಈಚೆಗೆ ಬಂದು, ಸ್ಥಳವನ್ನು ಖಾಲಿ ಮಾಡುವವರೆಗೂ, ಕಾವಲಿರುವವರು ಸ್ನಾನಕ್ಕಾಗಿ ನೀರಿಗೆ ಇಳಿಯಬಾರದು. ಜೀವ ಸಂರಕ್ಷಣೆಗಾಗಿ ಎಸೆಯುವ ಹಗ್ಗವೊಂದು ಸದಾಕಾಲ ತಯಾರಿರಬೇಕು.

ಪ್ರತಿ ಬೇಸಗೆಯಲ್ಲಿಯೂ ಬಾಲಕರು ಸ್ನಾನಕ್ಕೆ ಹೋದಾಗ, ಸೆಡೆತ ಬಂದು, ಅನೇಕರು ಸಾಯುತ್ತಾರೆ. ಮೇಲೆ ಹೇಳಿದ ಅಂಶದ ಬಗ್ಗೆ ಗಮನಹರಿಸದೇ ಇರುವ ಅವರ ಮೂರ್ಖತನವೇ ಇದಕ್ಕೆ ಕಾರಣವೆನ್ನಬೇಕು. ಸ್ನಾನ ಮಾಡುವಾಗ್ಗೆ, ಕಟ್ಟುನಿಟ್ಟಾದ ಮೇಲ್ವಿಚಾರಣೆ ಇರಬೇಕು ಮತ್ತು ಆ ಸ್ಥಳವು ಸುರಕ್ಷಿತವಾಗಿರಬೇಕು.

## ಅತಿಕ್ರಮ ಪ್ರವೇಶ

ಶಿಬಿರ ಹೂಡುವ ಮೊದಲು, ಆ ಆವರಣದ ಮಾಲೀಕರಿಂದ ಅನುಮತಿಯನ್ನು ಪಡೆಯಬೇಕು. ಈ ಅಂಶದ ಬಗ್ಗೆ ಜಾಗ್ರತೆವಹಿಸಿ. ಅನುಮತಿ ಇಲ್ಲದೆ ಪ್ರವೇಶ ಮಾಡುವ ಹಕ್ಕು ನಿಮಗಿಲ್ಲ. ಅದು ಅತಿಕ್ರಮವಾದೀತು. ಮಾಲೀಕರನ್ನು ಕಂಡು, ನೀವು ಯಾರೆಂಬುದನ್ನು ಅವರಿಗೆ ತಿಳಿಸಿ, ನೀವು ಏನು ಮಾಡಬೇಕೆಂದಿರುವಿರಿ? ಎಂಬುದನ್ನು ಅವರಿಗೆ ವಿವರಿಸಿದರೆ, ಆಗ ಅನೇಕ ಮಾಲೀಕರು ನಿಮಗೆ ಅನುಮತಿಯನ್ನು ನೀಡಿಯೇ ನೀಡುತ್ತಾರೆ.

ಬೇರೆಯವರ ಆವರಣದೊಳಗೆ ಹೋಗುವಾಗ, ಈ ಕೆಳಕಂಡ ಅಂಶಗಳನ್ನು ಮುಖ್ಯವಾಗಿ ಗಮನಿಸಬೇಕು.

(1) ಎಲ್ಲಾ ಗೇಟುಗಳನ್ನೂ ನೀವು ನೋಡಿದ ರೀತಿಯಲ್ಲಿಯೇ ಬಿಡಬೇಕು.

(2) ಪ್ರಾಣಿಗಳು ಮತ್ತು ಬೇಟೆಯ ಪ್ರಾಣಿಗಳಿಗೆ ಆದಷ್ಟೂ ತೊಂದರೆ ಕೊಡಬಾರದು. ಅವುಗಳ ವಿಷಯದಲ್ಲಿ ಶಾಂತಿ ಭಂಗ ಮಾಡಬಾರದು.

(3) ಮರಗಳು, ಬೆಳೆಗಳು ಮತ್ತು ಬೇಲಿಗೆ ಯಾವುದೇ ರೀತಿಯಲ್ಲೂ ಹಾನಿಯನ್ನುಂಟು ಮಾಡಬಾರದು.

ನಿಮಗೆ ಬೇಕಾದ ಸೌದೆ, ಕಟ್ಟಿಗೆಗಳನ್ನು ಮುಂದಾಗಿಯೇ ಕೇಳಿ ಪಡೆಯಬೇಕು. ಬೇಲಿಯಲ್ಲಿ ಖಾಲಿ ಜಾಗವನ್ನು ಮುಚ್ಚಲು ಉಪಯೋಗಿಸಿರುವ ಮುಳ್ಳುಕಂಪೆಯನ್ನು ಮುಟ್ಟೀರಿ ಜೋಕೆ!

## ಶಿಬಿರದಲ್ಲಿ ಕಾಲಹರಣ ಮಾಡುವವರು

ಶಿಬಿರವು ವಿಶಾಲವಾದ ಆವರಣ. ಅದರಲ್ಲಿ ಒಬ್ಬನಿಗೆ ಮಾತ್ರ ಜಾಗವಿಲ್ಲ. ಯಾರು ಶಿಬಿರದಲ್ಲಿ ಮಾಡಬೇಕಾದ ಹತ್ತಾರು ಕೆಲಸಗಳಲ್ಲಿ ತಮ್ಮ ಪಾತ್ರವನ್ನು ನಿರ್ವಹಿಸಲು ಒಪ್ಪುವುದಿಲ್ಲವೋ, ಅಂತಹವರಿಗೆ ಶಿಬಿರದಲ್ಲಿ ಜಾಗವಿಲ್ಲ. ಸೋಮಾರಿಗಳಿಗೆ ಮತ್ತು ಗೊಣಗುವವರಿಗೆ, ಶಿಬಿರದಲ್ಲಿ ಹಾಗಿರಲಿ, ಸ್ಕೌಟಿಂಗ್‌ನಲ್ಲೇ ಜಾಗವಿಲ್ಲ.

ಪ್ರತಿಯೊಬ್ಬರೂ ನಗು ನಗುತ್ತಾ ಇರಬೇಕು. ಪರಸ್ಪರವಾಗಿ ಸಹಾಯ ಮಾಡಬೇಕು. ಎಲ್ಲರ ಸೌಖ್ಯಕ್ಕಾಗಿ ಕೆಲಸ ಮಾಡಬೇಕು. ಈ ರೀತಿಯಲ್ಲಿ ಗೆಳೆತನವು ಬೆಳೆಯುತ್ತದೆ.

..........ಮುಂದುವರೆಯುತ್ತದೆ

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ
# Karnataka Scout & Guide News Magazine


## ಮರ–ಗಿಡಗಳನ್ನು ಬೆಳೆಸಿ ಪರಿಸರವನ್ನು ಉಳಿಸಿ









"What we are doing to the forests of the world is but a mirror reflection of what we are doing to ourselves and to one another."

*-Mahatma Gandhi*


Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227




**ಸಂಚಿಕೆಯ ವಾರ್ಷಿಕ ಚಂದಾ ರೂ. 50/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು




ದಿನಾಂಕ 07-06-13ರಂದು ರಾಜ್ಯ ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರವರು ಕೋಲಾರ ಜಿಲ್ಲೆಗೆ ಭೇಟಿ ನೀಡಿದ ಸಂದರ್ಭದಲ್ಲಿ ಶ್ರೀ ಬಾಬು ಮತ್ತು ಶ್ರೀ ರಾಜಪ್ಪ ರವರುಗಳಿಗೆ ಹಿಮಾಲಯ ವೃಕ್ಷಮಣಿ ಪ್ರಧಾನ ಮಾಡಲಾಯಿತು. ಚಿತ್ರದಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ.ವಿ. ಶಂಕರಪ್ಪ, ಗೌರವ ರಾಜ್ಯ ತರಬೇತಿ ಆಯುಕ್ತ ಶ್ರೀ ಸಿ.ಎಸ್. ರೆಡ್ಡಿ, ಜಿಲ್ಲಾ ಸಂಯೋಜಕರಾದ ಶ್ರೀ ಎನ್. ಶ್ರೀನಿವಾಸನ್ ಹಾಗೂ ಇತರ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳನ್ನು ಕಾಣಬಹುದು.



ಜೂನ್ 05 2013ರಂದು ಉಡುಪಿಯಲ್ಲಿ ಜರುಗಿದ "ವಿಶ್ವ ಪರಿಸರ ದಿನಾಚರಣೆ" ಅಂಗವಾಗಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ಬಿ. ರಾವ್ ಸ್ಕೌಟ್ಸ್-ಗೈಡ್ಸ್‌ಗಳಿಗೆ ಸಸಿಗಳನ್ನು ವಿತರಿಸಿದರು.



ದಿನಾಂಕ 09-06-2013ರಂದು ತೃತೀಯ ಸೋಪಾನ ತರಬೇತಿ ಶಿಬಿರದಲ್ಲಿ ನಡೆದ ಸರ್ವಧರ್ಮ ಸಮನ್ವಯ ಪ್ರಾರ್ಥನೆಯಲ್ಲಿ ಶ್ರೀ ಪ್ರಕಾಶ್ ಎಸ್. ಯಾಜಿ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಮತ್ತು ಇತರ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಹಾಗೂ ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು.



ಬೀದರ್ ನಗರದ ನೀಲಾಂಬಿಕಾ ಬಾಲಕೀಯರ ಪ್ರೌಢಶಾಲೆಯಲ್ಲಿ ಜಿಲ್ಲಾ ಸಂಸ್ಥೆ ವತಿಯಿಂದ ಜರುಗಿದ "ವಿಶ್ವ ಪರಿಸರ ದಿನಾಚರಣೆ" ಕಾರ್ಯಕ್ರಮದಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಡಾ. ಎಸ್. ಎಸ್. ಸಿದ್ಧಾರೆಡ್ಡಿ ಮಾತನಾಡುತ್ತಿರುವುದು.



ಜೂನ್ 05 2013ರಂದು ಬೆಳಗಾವಿ ನಗರದ ಸೇಂಟ್ ಮೇರಿ ಶಾಲೆಯಲ್ಲಿ "ವಿಶ್ವ ಪರಿಸರ ದಿನಾಚರಣೆ" ಅಂಗವಾಗಿ ಸಸಿಯನ್ನು ನೆಡಲಾಯಿತು. ಚಿತ್ರದಲ್ಲಿ ಶ್ರೀ ಜೆ.ಎನ್. ಫರ್ನಾಂಡಿಸ್, ಸಂಸ್ಥೆಯ ಉಪಾಧ್ಯಕ್ಷರು, ಶ್ರೀ ಎಸ್.ಎಂ. ನದಾಫ, ಜಿಲ್ಲಾ ಸಹ ಕಾರ್ಯದರ್ಶಿ ಶ್ರೀ ನಾಗೇಶ್ ಶಿವಪೂರ ಎ.ಎಸ್.ಓ.ಸಿ. ಹಾಗೂ ಸ್ಕೌಟ್ಸ್-ಗೈಡ್ಸ್‌ಗಳನ್ನು ಕಾಣಬಹುದು.



ಜೂನ್ 05 2013ರಂದು ಕೋಲಾರ ಜಿಲ್ಲೆ ಮುಳಬಾಗಿಲು ಸ್ಥಳೀಯ ಸಂಸ್ಥೆ ಹಾಗೂ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ ಬ್ಯಾಟನೂರು ಇವರುಗಳ ಸಂಯುಕ್ತಾಶ್ರಯದಲ್ಲಿ ಜರುಗಿದ "ವಿಶ್ವ ಪರಿಸರ ದಿನಾಚರಣೆ"ಯ ಅಂಗವಾಗಿ ಸಸಿಯನ್ನು ನೆಡಲಾಯಿತು.

Regd. as News Paper (Magazine) RNI No : 13348/1959. Postal Regd. No KA/BGW-549/2012-2014
Permitted to Post under WPP System. Vide No.: WPP-87.
Posted at: Mail Business Centre, Bangalore GPO on 25, 28, 30 Every Month (No. of Pages : 4 + 24 = 28)





05 ಜೂನ್ 2013ರಂದು ಶಾಂತಿಗೃಹದಲ್ಲಿ ನಡೆದ "ವಿಶ್ವ ಪರಿಸರ ದಿನಾಚರಣೆ"ಯಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳ ವಿಹಂಗಮ ನೋಟ.



"ವಿಶ್ವ ಪರಿಸರ ದಿನಾಚರಣೆ"ಯ ಅಂಗವಾಗಿ ಶಾಂತಿಗೃಹದಲ್ಲಿ ಏರ್ಪಡಿಸಿದ್ದ ಚಿತ್ರಕಲಾ ಸ್ಪರ್ಧೆಯಲ್ಲಿ ಭಾಗವಹಿಸಿದ್ದ ಸ್ಕೌಟ್ಸ್-ಗೈಡ್ಸ್‌ಗಳು.



ಜೂನ್ 5 ರಂದು "ವಿಶ್ವ ಪರಿಸರ ದಿನಾಚರಣೆ" ಅಂಗವಾ ಬಾಗಲಕೋಟೆಯ ಜಿಲ್ಲಾ ಕೇಂದ್ರ ಕಛೇರಿ ಆವರಣದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಸಸಿಗಳನ್ನು ನೆಡುತ್ತಿರುವುದು



**SCOUTS**
Creating a Better World



If not delivered, please return to :
THE EDITOR, Karnataka Scout & Guide
State Headquarters, Kondajji Basappa Road.
Prof. P. Sivashankar Circle, Fort
Bangalore - 560 002. Ph: 080-26701227
e-mail.: shq@scout.org.in

**Published by : The Bharat Scouts & Guides, Karnataka, State Headquarters, Fort, Bangalore - 560 002.**
**Publisher & Editor : M.A. Khalid. Printed by : L. Lingappa, M.D. at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bangalore - 560 026**